



॥ ಓಂ ಶ್ರೀ ಗುರು ಬಸವ ಲಿಂಗಾಯನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೪ ಜೂನ್ ೧೯೯೮ ಸಂಚಿಕೆ : ೬

ಪುಟಗಳಲ್ಲಿ .......



**ಪ್ರಧಾನ ಸಂಪಾದಕರು**
ಚನ್ನಪ್ಪ ಎರೇಸೀಮೆ

**ಸಂಪಾದಕರು**
ಹೆಚ್. ವಿ. ವೀರಭದ್ರಯ್ಯ

**ಸಹ ಸಂಪಾದಕರು**
ಎಚ್. ಎಸ್. ಸಿದ್ಧಗಂಗಪ್ಪ
ಎಂ. ರೇಣುಕಾರಾಧ್ಯ

**ಸಲಹಾ ಸಮಿತಿ**
ಡಾ. ಎಂ.ಎನ್. ಚನ್ನಬಸಪ್ಪ
ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ
ಗೊ.ರು. ಚನ್ನಬಸಪ್ಪ
ಟಿ. ಕೆ. ನಂಜುಂಡಪ್ಪ
ಎಚ್.ಎಸ್. ನರಸಿಂಹ ಜೀಯರ್
ಟಿ.ಆರ್. ಮಹಾದೇವಯ್ಯ
ಪ್ರೊ. ಆರ್. ರಾಚಪ್ಪ
ಪಿ.ಎಸ್. ಪುಟ್ಟಶಂಕರಯ್ಯ
ಬಿ. ಎಸ್. ಪರಮಶಿವಯ್ಯ

**ಸದಸ್ಯರು**
ಕೆ.ಎಸ್. ಶಂಕರಯ್ಯ
ಸಿ. ಎಸ್. ಸಿದ್ಧಲಿಂಗಯ್ಯ
ಪಿ. ವಿ. ಹುಚ್ಚವೀರಯ್ಯ
ಕೆ. ಸಿ. ಶಿವಗಂಗಯ್ಯ
ಎಸ್. ವಿಶ್ವನಾಥ್
ಪಿ.ಎನ್. ಚಂದ್ರಶೇಖರಯ್ಯ
ಕೆ.ಎಚ್. ಶಿವರುದ್ರಯ್ಯ

**ಪ್ರಕಾಶಕರು**
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104

**ಮುದ್ರಕರು** :
ಗೀತಾಂಜಲಿ ಪ್ರಿಂಟರ್ಸ್, ನಂ. ೫,
ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು-೫೪
ದೂರವಾಣಿ - ೩೩೪೪೪೦೮೬

**ವಿಳಾಸ :**
"ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪

**ಚಂದಾ ವಿವರ :**
ವಾರ್ಷಿಕ ಚಂದಾ ರೂ. ೫೦.
ಆಜೀವ ಸದಸ್ಯತ್ವ ರೂ. ೫೦೦.
ಬಿಡಿ ಪ್ರತಿ ರೂ. ೫.00

**ಸಾಹಿತ್ಯ, ಕಲೆ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ ಮೊದಲಾದ ಲೇಖನಗಳಿಗೆ ಸ್ವಾಗತವಿದೆ.**

## ಸಂಪಾದಕೀಯ....

"ಕಾಯಕದಿಂದ ಬಂದುದು ಮಾತ್ರ ಪ್ರಸಾದ, ಇನ್ನುಳಿದ ಮೂಲಕ ಬಂದುದೆಲ್ಲ ಕೂಳು" - ಎಂದರು ಮಾನ್ಯಶ್ರೀ ಬಾಬಾಗೌಡ ಪಾಟೀಲರು, ಗ್ರಾಮೀಣಾಭಿವೃದ್ಧಿ ಸಚಿವರು, ಭಾರತ ಸರ್ಕಾರ, ಸಂದರ್ಭ ದಿನಾಂಕ 18-5-98ರಂದು ಗುಬ್ಬಿ ತಾಲ್ಲೂಕು ಯಲ್ಲಾಪುರ ಗ್ರಾಮದಲ್ಲಿ ಬಸವ ಜಯಂತಿಯನ್ನಾಚರಿಸಿದ ಶುಭ ಸಮಾರಂಭದಲ್ಲಿ ಶ್ರೀಯುತರು ಮುಖ್ಯ ಅತಿಥಿಗಳಾಗಿ ಮಾತನಾಡುತ್ತ ಧರ್ಮ ಇಲ್ಲದೆ ಬದುಕಲು ಸಾಧ್ಯವಿಲ್ಲ ಎನ್ನುತ್ತ - ಕೃಷಿ ಕೃತ್ಯ ಕಾಯಕವನ್ನು ಭಕ್ತಿಮಾಧ್ಯಮವೆಂದರು. ಒಕ್ಕಲುತನ ಧರ್ಮ ನಿಷ್ಠವಾದುದು. ಅಲ್ಲಿ ಲಾಭ-ನಷ್ಟಗಳ ಲೆಕ್ಕಾಚಾರ ಸಲ್ಲದು. ಲೋಕಕ್ಕೆ ಅನ್ನದಾಸೋಹ ಮಾಡುವ ಕೃಷಿಕಾಯಕ ಇತರ ಉದ್ಯೋಗಗಳಂತಲ್ಲ. ಉದ್ಯೋಗವೆಂದಾಗ ಲಾಭ-ನಷ್ಟಗಳ ಮಾತು ಬರುತ್ತದೆ. ಆದರೆ ಆರಂಭ ಹಾಗಲ್ಲ. "ಆನು ಆರಂಭದ ಮಾಡುವೆನೆಯ್ಯಾ ಗುರುಪೂಜೆಗೆಂದು" ಬಸವಣ್ಣನವರು ಮಾರ್ಗದರ್ಶನ ಮಾಡಿದ್ದಾರೆ. ಆರಂಭವೆಂಬುದು ಗುರುಪೂಜೆಗೆ ಸಮಾನವಾದುದು. ಪೂಜೆ ಸಂಸ್ಕೃತಿಯ ಒಂದು ಅಂಗ. ಅದಕ್ಕಾಗಿಯೇ Agriculture ಎಂದುದು. ಆದರೆ, ಇಂದು ಅಂಥ ಪೂಜ್ಯ Agriculture Agribusiness ಆಗಿದೆ ಎಂದು ವಿಷಾದಿಸಿದರು. ಕೋಟಿವಿದ್ಯೆಗಳಲ್ಲಿ ಮೇಟಿ ವಿದ್ಯೆಯೆ ಮೇಲು ಎಂದ ಸರ್ವಜ್ಞ. ಮೇಟಿ ನಿಂತರೆ ಲೋಕದಾಟವೇ ಸ್ತಬ್ಧವಾದೀತು.

ಭರತಖಂಡ ವ್ಯವಸಾಯ ಪ್ರಧಾನ ರಾಷ್ಟ್ರ. ಆದರೆ, ಸ್ವಾತಂತ್ರ್ಯ ಬಂದನಂತರ ದೇಶವನ್ನು ಕೈಗಾರಿಕಾ ರಾಷ್ಟ್ರವನ್ನಾಗಿ ಬೆಳೆಸುವ ಯೋಜನೆಗಳನ್ನು ಹಮ್ಮಿಕೊಂಡಿದ್ದರ ಪರಿಣಾಮವಾಗಿ ಇಂದು ಹಲವಾರು ಸಾಮಾಜಿಕ ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ನಗರಗಳ ಮಿತಿಮೀರಿದ ಬೆಳವಣಿಗೆ, ಅನಾರೋಗ್ಯದ ಕೊಳಚೆಗೇರಿಗಳ ನಿರ್ಮಾಣ, ರೌಡಿಗಳ ತಾಂಡವನೃತ್ಯ, ನೆಲಜಲಗಳ ಮಾಲಿನ್ಯ ಇತ್ಯಾದಿ ವಿಜೃಂಭಿಸಿವೆ. ಗ್ರಾಮಜೀವನವೂ ಹದಗೆಟ್ಟು ಕುಳಿತಿದೆ. ರಾಜಕೀಯದ ದಳ್ಳುರಿಯಲ್ಲಿ ಜೀವನ ಮೌಲ್ಯಗಳೆಲ್ಲ ಸುಟ್ಟುಸೀದಿವೆ.

ಪ್ರೀತಿ ವಿಶ್ವಾಸಗಳ ಸ್ಥಾನದಲ್ಲಿ ಅನುಮಾನ, ಆತಂಕಗಳು ಬೀಡು ಬಿಟ್ಟಿವೆ. ಪರಸ್ಪರ ಕಾಲೆಳೆವ ಆಟದಲ್ಲಿ ಹಿರಿಯರೆನಿಸಿಕೊಂಡ ಕೆಲವರು ಯುವ ಜನತೆಗೆ ಆದರ್ಶರಾಗಿದ್ದಾರೆ.

"ಹುತ್ತವಬಡಿದೊಡೆ ಹಾವು ಸಾಯಬಲ್ಲುದೆ?" ಅಣ್ಣನವರ ವಾಣಿಯ ಅಂತರಾರ್ಥವನ್ನರಿತು ಆಚರಿಸಬೇಕಾಗಿದೆ. ಹುತ್ತದೊಳಗಿರುವ ಹಾವನ್ನು ಹೊರಗೆಳೆದು ಬಡಿಯಬೇಕಾಗಿದೆ. ಮನಮನದ ಒಳಕೋಣೆಯಲ್ಲಡಗಿರುವ ಹಾವು ಸಾಯದ ಹೊರತು ಉದ್ಧಾರವೆಂತು?

"ಬಸವ ಜಯಂತಿಯನ್ನಿಂದು ಸಮನ್ವಯಕ್ಕಾಗಿ, ಸಮಾಜ ಕಟ್ಟುವುದಕ್ಕಾಗಿ, ಆತ್ಮಾವಲೋಕನಕ್ಕಾಗಿ, ತತ್ವಾನುಸಂಧಾನಕ್ಕಾಗಿ" ಆಚರಿಸಬೇಕು ಎಂಬ ಸಿದ್ಧಗಂಗಾ ಶ್ರೀಗಳವರ ನುಡಿಗಳನ್ನು ಚಿಂತನ ಮಂಥನ ಮಾಡಬೇಕಾಗಿದೆ. ಬಸವಣ್ಣ ಕೇವಲ ಧರ್ಮಗುರುವಲ್ಲ ಮತ್ತು ಯಾವುದೇ ಒಂದು ವರ್ಗಕ್ಕೆ ಸೀಮಿತನಾದವನಲ್ಲ, ಪರಿಪೂರ್ಣತೆಯನ್ನು ಸಾಧಿಸುವತ್ತ ನಡೆದ ಮಾನವರತ್ನ ಎಂಬುದನ್ನರಿತಲ್ಲಿ ನಮ್ಮ ಜೀವನ ಸುಂದರ.

-- ಸಂಪಾದಕರು





## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಗುರುವೆಂಬುದದು ತತ್ವ ಗುರುವೆಂಬುದದು ಪ್ರಾಣ
ಗುರುವೆಂಬುದದುವೆ ತನ್ನರಿವು। ತಿಳಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಗುರುವು ಪ್ರೇಮದ ಹೊನಲು ಗುರುವು ಕಾಸಿದ ಹಾಲು
ಗುರುವು ಬೆನ್ನಿಗೆ ನಿಂತ ಶಿವ ಕಾವಲು। ತಿಳಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಗುರುವುಹರನರೂಪ ಗುರುವು ಶಿಷ್ಯನ ಪ್ರಾಣ
ಗುರುವೆ ಸರ್ವಸ್ವವು ನರ ಜಗದಿ । ತಿಳಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಕಾಲಕರ್ಮವ ಗೆದ್ದ ಶಿವರೂಪವೆ ಗುರುರೂಪ
ಲೀಲೆ ತಾನಾಡುವ ಜಯರೂಪ । ತಿಳಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಆರನು ಕಳೆಯೆಂದ ಮೂರನು ತಿಳಿಯೆಂದ
ಧೀರಗುರುವೆ ಮಾರಹರರೂಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಇಟ್ಟರೆ ವರವಾಯ್ತು ಕೊಟ್ಟರೆ ಶಾಪವಾಯ್ತು
ದಿಟ್ಟಧೀರ ಗುರುವೆ ಉದ್ಧಾನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಮಿಂಚು ಪವಾಡವೆ ಕಂಚಿನ ಕಂಠವೆ
ಹಂಚಿದೆ ಅಕ್ಷರವ ಜಯಗುರುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಚಿತ್ತ ಬಾಗೆತ್ತರದಿ ಕರವು ಶಿವಕಾಯಕದಿ
ಉತ್ತಹೊಲವಾಯ್ತು ಚರಿತವು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಬಿತ್ತಿದ್ದು ಶಿವಬೀಜ ಬೆಳೆದದ್ದು ಬೆಳೆ ಬಸವ
ಹೊಕ್ಕಿದ್ದು ದಾಸೋಹ ಎಲ್ಲೆಲ್ಲು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ತಮ್ಮ ಶಾಪಕೆ ತಾವೆ ದಂಡತೆತ್ತ ಗುರುವೆ
ಅಮ್ಮ ಕಾರುಣ್ಯವೆ ಉದ್ಧಾನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

-- ಹೆಚ್. ವಿ. ವೀರಭದ್ರಯ್ಯ



## ಶ್ರೀ ವಾಣಿ

"ಸ್ವಾಮಿಗಳು ಗ್ರಾಮಾಂತರ ಬಸವ ಜಯಂತಿ ಯೋಜನೆಯನ್ನು ರೂಪಿಸಿ ಶ್ರೀಮಠಕ್ಕೆ ಹೊಸ ಆಯಾಮವನ್ನೇ ತಂದಿದ್ದಾರೆ. ಸಮಾಜದಲ್ಲಿ ನವ ಜಾಗೃತಿಯನ್ನುಂಟುಮಾಡಿದ್ದಾರೆ. ನಿಷ್ಕ್ರಿಯವಾದ ಬದುಕಿಗೆ ಕ್ರಿಯಾ ಶಕ್ತಿಯ ಸಂಜೀವಿನಿಯಾಗಿ ನಡೆದಿದ್ದಾರೆ" ಎಂಬುದಾಗಿ ಅಭಿಮಾನಿಗಳು, ವಿಚಾರವಂತರು, ಜಯಂತಿಯಲ್ಲಿ ಪಾಲ್ಗೊಳ್ಳುತ್ತಿರುವ ಅನುಭಾವಿಗಳು, ವಿದ್ವಾಂಸರು ಮುಕ್ತಮನಸ್ಸಿನಿಂದ ಯೋಜನೆಯನ್ನು ಸ್ವಾಗತಿಸುತ್ತಿರುವುದು ಸಂತೋಷವನ್ನುಂಟುಮಾಡಿದೆ.

ಕೆಲವು ಆತ್ಮೀಯರು "ಸ್ವಾಮಿಗಳು ನಾಟಕ ನೋಡುವುದರ ಮೂಲಕ ಈ ತುಂಬ ವಯಸ್ಸಿನಲ್ಲಿ ತುಂಬ ಆಯಾಸ ಮಾಡಿಕೊಳ್ಳುತ್ತಿದ್ದಾರೆ" ಎಂಬುದಾಗಿಯೂ ಆಡಿಕೊಳ್ಳುತ್ತಿರುವುದು ನಮ್ಮ ಗಮನಕ್ಕೆ ಬಂದಿದೆ. ಒಂದೆರಡು ಬಾರಿ ಒಬ್ಬಿಬ್ಬರು ನಮ್ಮೊಂದಿಗೆ ಪ್ರಸ್ತಾಪಿಸಿದ್ದೂ ಉಂಟು. ಆದರೆ, ನಮ್ಮ ಯೋಚನೆಯೇ ಬೇರೆ. ಬಸವಣ್ಣನವರಂಥ ಲೋಕಮಾನ್ಯ ಮಹಾನುಭಾವರನ್ನು ಕುರಿತು ಅಧ್ಯಯನ, ಚಿಂತನ, ಪ್ರವಚನ, ಪ್ರದರ್ಶನ, ಪ್ರಚಾರ ಮಣಿಹಗಳಲ್ಲಿ ಮನಮಗ್ನವಾದಾಗ ಆಯಾಸವೆಂಬುದೇ ಗಮನಕ್ಕೆ ಬಾರದು. ಬದಲಾಗಿ ಒಂದು ಹೊಸ ಚೈತನ್ಯ, ಹೊಸ ಉತ್ಸಾಹ ಬಂದಂತಾಗುತ್ತದೆ. ದೇಹಕ್ಕಾಗುವ ಆಯಾಸವನ್ನು ಈ ಉತ್ಸಾಹ ನಿವಾರಿಸುತ್ತದೆ. ಲವಲವಿಕೆ ಹೆಚ್ಚಾಗುತ್ತದೆ. ಅದನ್ನು ಹೇಳಿಕೊಳ್ಳಲಾಗದ ಅನುಭವ ನಮ್ಮದಾಗುತ್ತದೆ. "ಮಾತು ಮನಂಗಳಿಂದತ್ತ ಮೀರಿದ" ಅನುಭವವೆಂದೇ ಹೇಳಬೇಕು.

ಬಸವ ಜಯಂತಿಯಾದ ಮರುದಿನ ನಾಟಕ - ಇಡೀ ರಾತ್ರಿ ನೋಡಿದ ನಂತರವೂ ನಮಗೆ ದಿನಚರಿಯಲ್ಲಿ ಚಾಚೂ ವ್ಯತ್ಯಾಸವಾಗುವುದಿಲ್ಲ. ದೇಹಾಲಸ್ಯವಿರಲಿ, ಮನದ ಮರವೆಯೂ ಕಾಣುವುದಿಲ್ಲ. ಬಸವಣ್ಣ ಮಂತ್ರಪುರುಷನೆಂಬುದರ ಅಂತರಾರ್ಥ ಅನುಭವಗೋಚರವಾಗುತ್ತಿದೆ.

ಗ್ರಾಮಾಂತರ ಬಸವ ಜಯಂತಿಯಲ್ಲಿ ಸಹಕರಿಸುತ್ತಿರುವ ಎಲ್ಲರನ್ನೂ ಈ ಸಂದರ್ಭದಲ್ಲಿ ಸ್ಮರಿಸಲು ಸಂತೋಷವಾಗುತ್ತದೆ.

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

ಅಣಿಮಾ ಗರಿಮಾ ಲಘಮಾ ಮಹಿಮಾ
ಪ್ರಾಪ್ತಿ ಪ್ರಾಕಾಮ್ಯ ಈಶತ್ವ ವಶತ್ವವೆಂಬ
ಅಷ್ಟ ಮಹದೈಶ್ವರ್ಯವ ತೃಣೀಕರಿಸಿಕೊಂಡಿಪ್ಪನು ನೋಡಾ ಶರಣನು
ಅಂಜನಾ ಸಿದ್ಧಿ, ಘಟಿಕಾಸಿದ್ಧಿ, ಕಾಯಸಿದ್ಧಿ, ರಸಸಿದ್ಧಿ,
ವಾಚಾಸಿದ್ಧಿ, ದೂರ ಶ್ರವಣ, ದೂರದೃಷ್ಟಿ, ತ್ರಿಕಾಲ ಜ್ಞಾನ
ಪರಕಾಯ ಪ್ರವೇಶ, ಖೇಚರಗಮನ, ಅಗ್ನಿ ಸ್ತಂಭ, ಜಲಸ್ತಂಭ
ಮಾರಣ, ಮೋಹನ, ಉಚ್ಚಾಟನ ಇಂತಿವು ಮೊದಲಾದ
ನಾನಾ ಕುಟಿಲಸಿದ್ಧಿಯ ಪ್ರಪಂಚ ಹೊದ್ದನು ನೋಡಾ ಶರಣನು!
ಗುಣತ್ರಯಂಗಳನಳಿದ ನಿರ್ಗುಣನು
ನಿತ್ಯನು, ನಿರಾಮಯನು ನೋಡಾ ಶರಣನು!
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ!

ಶರಣನು ಅಣಿಮಾ, ಮಹಿಮಾ ಮುಂತಾದ ಅಷ್ಟ ಐಶ್ವರ್ಯಗಳನ್ನು ಕೂಡ ಹುಲ್ಲುಕಡ್ಡಿಗೆ ಸಮನಾಗಿ ನೋಡುವನು. ಅಂಜನಾ ಸಿದ್ಧಿ, ಘಟಿಕಾಸಿದ್ಧಿ ಮೊದಲಾದ ಸಿದ್ಧಿಗಳನ್ನು ಮಾಡಿತೋರಿಸುವ ಪ್ರಪಂಚದಿಂದಲೂ ದೂರಾಗಿರುವನು. ಯಾಕೆಂದರೆ ಈತನು ಪ್ರಕೃತಿ ಗುಣಂಗಳನ್ನೆಲ್ಲಾ ಮೀರಿ ಸಂಸಾರ ಬಾಧೆಗೊಳಪಡೆದ ಪರಮಾತ್ಮರೂಪನೇ ಆಗಿರುವನು.

(**ಕೃಪೆ** : ಷಟ್‌ಸ್ಥಲ ಜ್ಞಾನ ಸಾರಾಮೃತ - ಶ್ರೀ.ತೋ.ಸಿ.ಕೈಂ. ಸೇ. ಸಂಘ, ಎಡೆಯೂರು-ಗದಗ)

## ಅಭಿನಂದನ ಸಮಾರಂಭ



ಕನ್ನಡನಾಡಿನ ಖ್ಯಾತ ವಿದ್ವಾಂಸರೂ, ನಿವೃತ್ತ ಕನ್ನಡ ಪಂಡಿತರೂ ಆದ ಮಾನ್ಯಶ್ರೀ ಪಂಡಿತ ಚನ್ನಪ್ಪ ಎರೇಸೀಮೆಯವರ ಮಿತ್ರರು, ಶಿಷ್ಯರು ಅವರು ನಾಡು-ನುಡಿಗೆ ಸಲ್ಲಿಸಿರುವ ಅನುಪಮ ಸೇವೆಯನ್ನು ಗುರುತಿಸಿ ಅವರನ್ನು ಅಭಿನಂದಿಸಲು ಒಂದು ಅಭಿನಂದನ ಸಮಿತಿಯನ್ನು ರಚಿಸಿದ್ದಾರೆ. ಅವರನ್ನು ಸೆಪ್ಟೆಂಬರ್ ತಿಂಗಳ 5ರಂದು ಶಿಕ್ಷಕರ ದಿನಾಚರಣೆಯಂದು ಅಭಿನಂದಿಸಿ ಸನ್ಮಾನಿಸಲು ಏರ್ಪಾಡಾಗುತ್ತಿವೆ. ಶಿಕ್ಷಣ ತತ್ವಗಳನ್ನು ಒಳಗೊಂಡ ಒಂದು ಅಭಿನಂದನ ಗ್ರಂಥ, ಅವರ ಜೀವನ ಚರಿತ್ರೆ ಆ ಸಂದರ್ಭದಲ್ಲಿ ಬಿಡುಗಡೆಯಾಗಲಿವೆ. ಈ ಅಭಿನಂದನ ಸಮಿತಿಗೆ ಶ್ರೀ ಸಿದ್ಧಗಂಗೆಯ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಪೋಷಕರಾಗಿಯೂ, ನ್ಯಾಯಮೂರ್ತಿ ಶ್ರೀ ಡಿ. ಎಂ. ಚಂದ್ರಶೇಖರ್ ಅವರು ಅಧ್ಯಕ್ಷರಾಗಿಯೂ, ಶ್ರೀ ಬಿ. ಎಸ್. ಮುದ್ದಪ್ಪ, ಬಿ. ಎಸ್. ಶಿವಣ್ಣ ಮೊದಲಾದವರು ಉಪಾಧ್ಯಕ್ಷರಾಗಿಯೂ, ಶ್ರೀ ಟಿ.ಆರ್. ಮಹಾದೇವಯ್ಯನವರು ಪ್ರಧಾನ ಕಾರ್ಯದರ್ಶಿಗಳಾಗಿಯೂ ಇದ್ದಾರೆ.

ಎರೇಸೀಮೆಯವರ ಮಿತ್ರರು ಹಾಗೂ ಶಿಷ್ಯರು ಈ ಕಾರ್ಯದಲ್ಲಿ ನೆರವಾಗಬೇಕೆಂದು ವಿಜ್ಞಾಪಿಸಲಾಗಿದೆ.

**ಸಂಪರ್ಕ ವಿಳಾಸ :**
**ಪಂ. ಚೆನ್ನಪ್ಪ ಎರೇಸೀಮೆ** ಅಭಿನಂದನ ಸಮಿತಿ
ಶ್ರೀ ಸಿದ್ಧಗಂಗಾ ಕಲ್ಯಾಣಧಾಮ,
ಮಂಜುನಾಥನಗರ, ಬೆಂಗಳೂರು-560 010
ದೂರವಾಣಿ : 3350159





# ಅಂಬಿಗರ ಚೌಡಯ್ಯನ ವಚನ - ಒಂದು ಚಿಂತನ

**ಪಂಡಿತ ಚನ್ನಪ್ಪ ಎರೇಸೀಮೆ**
597, 2ನೇ ಮುಖ್ಯರಸ್ತೆ, 2ನೇ ಅಡ್ಡರಸ್ತೆ,
ಮಾಗಡಿ ಕಾರ್ಡ್‌ರಸ್ತೆ, ವಿಜಯನಗರ,
ಬೆಂಗಳೂರು-560 040

*ಬಸವಣ್ಣನವರ ಸಾಮಾಜಿಕ ಕ್ರಾಂತಿಯ ಪ್ರಭಾವದಿಂದ ಅನೇಕ ಜನ ಕಾಯಕ ಮಗ್ನ ವಿಚಾರವಾದಿಗಳಿಗೆ ಆತ್ಮವಿಶ್ವಾಸ ಮೂಡಿತು. ಅವರ ಭಕ್ತಿ ಜೀವನಕ್ಕೆ ಬಣ್ಣವೇರಿತು. ತಮಗೆ ಎಂದೂ ಯಾರೂ ಹೇಳದಿದ್ದ ಧರ್ಮ ರಹಸ್ಯದ ನುಡಿಗಳಿಂದ ಉತ್ತೇಜಿತರಾದರು. ಅವರಲ್ಲಿ ಅಂಬಿಗರ ಚೌಡಯ್ಯ ಶರಣರೂ ಒಬ್ಬರು. ವೀರಶೈವ ತತ್ವಾನುಷ್ಠಾನದಲ್ಲಿ ಜೀವಿಸುತ್ತಿದ್ದ ಈ ಮಹಾಶರಣನ ಗುಣ ಸ್ವಭಾವಗಳು ಅನುಭಾವ ಆಲೋಚನೆಗಳು, ಅಭಿವ್ಯಕ್ತಿಗಳು; ಇವನೊಬ್ಬ ಕಟ್ಟುಗ್ರದ ನಿಷ್ಠುರ ಶರಣನೆಂಬುದಾಗಿ ಸ್ಪಷ್ಟಪಡಿಸಿವೆ. ಈ ಕಾರಣದಿಂದ ಇವನೊಬ್ಬ ಬಹುದೊಡ್ಡ ವಚನಕಾರರೆಂಬ ಹೆಗ್ಗಳಿಕೆಗೆ ಪಾತ್ರನಾಗದಿದ್ದರೂ ಬಹುಜನಪ್ರಿಯ ವಚನಕಾರನೆಂದು ಖ್ಯಾತಿಗಳಿಸಿದ್ದಾನೆ. ಜೂನ್ 10ರಂದು ಅಂಬಿಗರ ಚೌಡಯ್ಯನವರ ಜನ್ಮದಿನ. ಹಿರಿಯ ವಿದ್ವಾಂಸಗಾರ ಪಂಡಿತ ಚನ್ನಪ್ಪ ಎರೇಸೀಮೆ ಅವರು ಅಂಬಿಗರ ಚೌಡಯ್ಯನ ಒಂದು ವಚನವನ್ನು ವಿಶ್ಲೇಷಿಸಿದ್ದಾರೆ.*

ಕುಲಹೀನ ಶಿಷ್ಯಂಗೆ ಅನುಗ್ರಹವ ಮಾಡಿ
ಕೊನೆಗೆ ಅವನ ಮನೆಯಲಿ ಉಣಬಾರದೆಂದು
ಅಕ್ಕಿ ಕಣಕವ ತಕ್ಕೊಂಡು ಹೋಗುವ ಗುರುವಿನ ಕಂಡು
ಕೆಡವಿ ಹಾಕಿ ಮೂಗನು ಕೊಯ್ದು
ಇಟ್ಟಿಗೆಯ ಕಲ್ಲಿಂದ ತಿಕ್ಕಿ, ಸಾಸಿವೆಯ ಹಿಟ್ಟನ್ನು ತಳೆದು
ಲಿಂಬಿಯ ಹುಳಿಯನ್ನು ಹಿಂಡಿ
ಪಡುವ ಗಾಳಿಗೆ ಹಿಡಿಯೆಂದಾತ ನಮ್ಮ
ಅಂಬಿಗರ ಚೌಡಯ್ಯ !

**-ಅಂಬಿಗರ ಚೌಡಯ್ಯ**

ಸಮಾಜ ವ್ಯವಸ್ಥೆಯಲ್ಲಿ ವಿವಿಧ ವೃತ್ತಿಗಳು ಅನಿವಾರ್ಯ. ಅವು ಒಂದಕ್ಕೊಂದು ಪೂರಕಗಳು. ವೃತ್ತಿಗಳ ಮೇಲಿಂದ ಜನಾಂಗವನ್ನು ವಿಂಗಡಿಸಿ, ಅವುಗಳಲ್ಲಿ ತರತಮ ಭಾವವನ್ನು ಉಂಟುಮಾಡಿ, ಅನೇಕ ಜಾತಿಗಳನ್ನು ಕಲ್ಪಿಸಬಾರದು. ಆ ಜಾತಿ ಜಾತಿಗಳ ಮಧ್ಯದಲ್ಲಿ ಕಂದಕಗಳನ್ನು ಸೃಷ್ಟಿಸಬಾರದು. ಹಾಗೆ ಸೃಷ್ಟಿಸಿದರೆ, ಜನಾಂಗ ಛಿದ್ರ-ಛಿದ್ರವಾಗಿ ಜಾತಿ-ಕುಲ-ಪಂಗಡ ಭಾವ ಬಲಿತು, ದ್ವೇಷಾಸೂಯೆಗಳ ಹೊಗೆ ಹೊರಹೊಮ್ಮಿ ರಾಷ್ಟ್ರಶಕ್ತಿ ನಷ್ಟವಾಗಿ ಹೋಗುತ್ತದೆಂಬುದನ್ನು ಭಾರತದ ಇತಿಹಾಸದಲ್ಲಿ ಎಲ್ಲರೂ ಕಂಡುಂಡ ಕಹಿಯ ಕಥೆಯಾಗಿದೆ. ಅನಾದಿ ಕಾಲದಿಂದಲೂ ಭಾರತದ ಕ್ಷಾತ್ರಶಕ್ತಿ ನಷ್ಟವಾಗುತ್ತಾ ಬಂದು ಕೊನೆಗೆ ಪರಕೀಯರ ಕಪಿಮುಷ್ಟಿಗೆ ಸಿಕ್ಕು ಜರ್ಜರಿತಗೊಂಡುದೂ ಕೂಡ ಈ ಅವೈಜ್ಞಾನಿಕ ವರ್ಗ-ವರ್ಣ-ಕುಲ-ಜಾತಿ-ಪಂಗಡ ಕಲ್ಪನೆಯ ತರತಮಭಾವದ ಕಾರಣವಾಗಿಯೇ ಎಂಬುದು ಕಟುಸತ್ಯ ವಿಷಯವೇ. ಭಾರತೀಯರನ್ನೆಲ್ಲ ಒಂದು ತತ್ತ್ವ ಸಿದ್ಧಾಂತದಡಿಗೆ ಸಮತೆಯ ಆಧಾರದ ಮೇಲೆ ಒಗ್ಗೂಡಿಸುವ ಕಾರ್ಯಕ್ಕೆ ಕೈಯಿಕ್ಕಿದವರಲ್ಲಿ ಬಸವಣ್ಣನವರಿಗೆ ಪ್ರಥಮ ಪ್ರಾಶಸ್ತ್ಯ ದೊರೆಯಬೇಕೆನ್ನುವುದಕ್ಕೆ ಅವರ ವಚನಗಳು ಸಾಕ್ಷೀಭೂತವಾಗಿವೆ. ಅವರು ಭಾರತೀಯ ತತ್ತ್ವಜ್ಞರಲ್ಲಿ ತತ್ತ್ವಜ್ಞರು. ಸಮಾಜವಾದದಲ್ಲಿ ಶ್ರೇಷ್ಠ ಸಮಾಜವಾದಿಗಳು, ರಾಷ್ಟ್ರೀಯ ಮುತ್ಸದ್ದಿಗಳಲ್ಲಿ ಮುತ್ಸದ್ದಿಗಳು, ಅರ್ಥಶಾಸ್ತ್ರದಲ್ಲಿ ಮಹಾತಜ್ಞರು. ತನ್ಮಯತೆಯಿಂದ, ಶ್ರದ್ಧಾಭಕ್ತಿ, ವಿಶ್ವಾಸಗಳಿಂದ ಯಾವಕ್ರಿಯೆ ಮಾಡಿದರೂ ಅದು ಯೋಗದ ಮಟ್ಟದ್ದೆಂದು ಸಾರಿದವರು.[1]. ಅವರ ಈ ಮಹಾಕ್ರಾಂತಿಯಲ್ಲಿ ವ್ಯಕ್ತವಾಗುವ ಮುಖ್ಯಾಂಶಗಳಲ್ಲಿ

1. "ಯೋಗಃ ಕರ್ಮಸು ಕೌಶಲಂ" - ಭಗವದ್ಗೀತೆಯಲ್ಲಿ ಈ ನುಡಿ ನಮಗೆ ಸಿಕ್ಕುತ್ತಿದ್ದರೂ. ಈ ಮಾತಿನ ಅರ್ಥ ಸಮಾಜದಲ್ಲಿ ರೂಢಮೂಲವಾಗದೆ, ಕ್ರಿಯೆಯಲ್ಲಿ ತಾರತಮ್ಯ ಮತ್ತು ಮೇಲು ಕೀಳುಗಳನ್ನು ಭಾರತ ಬೆಳೆಸಿಕೊಂಡು ಬಂದದು ಕಂಡುಬರುತ್ತಿದೆ. ಪ್ರಪಂಚದ ಬಹುದೊಡ್ಡ ಧರ್ಮಗಳಾದ ಇಸ್ಲಾಂ, ಕ್ರಿಶ್ಚಿಯನ್ ಮೊದಲಾದ ಧರ್ಮಗಳಲ್ಲಿ ಈ ತಾರಾತಮ್ಯ ಕಿತ್ತು ಹಾಕಿದ ಕಾರಣ ಅವು ಪ್ರಪಂಚ ವ್ಯಾಪ್ತಿಯಲಿ ಹರಡಲು ಕಾರಣವಾಯಿತೆಂಬುದು ಲಕ್ಷೀಕರಿಸಬೇಕಾದುದು ಮುಖ್ಯ.

ಧರ್ಮದಿಂದ, ಧರ್ಮಗ್ರಂಥ ಗಳಿಂದ, ಧಾರ್ಮಿಕ ಸ್ಥಲಗಳಿಂದ ವಂಚಿತರಾಗಿ, ಪುರೋಹಿತಶಾಹಿಯ ಕಪಿಮುಷ್ಟಿಯಲ್ಲಿ ಸಿಕ್ಕು ಕೀಳರಿಮೆಯ ಅತೃಪ್ತ ವಿವಿಧ ಕುಲದವವನ್ನು ಕಸುಬುದಾರರನ್ನು, ಅಸ್ಪೃಶ್ಯಾದಿ ಅಭಿಶಾಪದಿಂದ ಅಭಿಭೂತರಾದವರನ್ನು ಹೇಗೆ ಮೇಲಕ್ಕೆತ್ತಬೇಕು? ಏನೂ ಗೊತ್ತಿಲ್ಲದ ಅವರ ಅಪಾರ ಕ್ರಿಯಾಶಕ್ತಿಯನ್ನು ಕ್ರಿಯಾಯೋಗದ ಮೂಲಕ ಹೇಗೆ ರಾಷ್ಟ್ರೀಯ ಉತ್ಕರ್ಷಕ್ಕೆ ಪೂರಕಗೊಳಿಸಬೇಕು? ಎಂದು ಆಳವಾಗಿ ಯೋಚಿಸಿದ್ದನ್ನು ಕಾಣಬಹುದು. ಆದುದರಿಂದ ಕುಲ-ಜಾತಿ-ಮತ-ವರ್ಣಪದ್ಧತಿಯ ಮೇಲೆ ಪ್ರಬಲ ದಾಳಿಯನ್ನೇ ಮಾಡಿದರು.[2] ಈ ದಾಳಿಯಲ್ಲಿ ಅವರು ಹಿಡಿದ ಅಸ್ತ್ರ "ಷಟ್‌ಸ್ಥಲ ಸಿದ್ಧಾಂತ". ಪ್ರಾಚೀನವಾದ ಈ ಅಲಗಿನ ತುಕ್ಕುತೆಗೆದು ಮಸೆದು-ಪಳಗಿಸಿ-ಹಿಡಿದು ಝಳಪಿಸಿ, ಕಡುಗಲಿಯಾಗಿ ಜಂಬೂದ್ವೀಪ ನವಖಂಡ ಪೃಥ್ವಿಯಲ್ಲಿನ ಎಲ್ಲ ತತ್ತ್ವಜ್ಞರ ಗಮನ ಸೆಳೆಯಲು ಪ್ರಯತ್ನಿಸಿದ್ದನ್ನು ಕಾಣಬಹುದು.[3]

ಬಸವಣ್ಣನವರ ಈ ಕ್ರಾಂತಿಯ ಕಾರಣವಾಗಿ ಅನೇಕ ಕಾಯಕ ಮಗ್ನ ವಿಚಾರವಾದಿಗಳಿಗೆ ಆತ್ಮಪ್ರತ್ಯಯ ತುಂಬಿತು. ಅವರ ಭಕ್ತಿಜೀವನಕ್ಕೆ ಬಣ್ಣವೇರಿತು. ತಮಗೆ ಎಂದೂ ಯಾರೂ ಹೇಳದಿದ್ದ ಧರ್ಮರಹಸ್ಯದ ಈ ಧೈರ್ಯದ ನುಡಿಗಳಿಂದ ಉತ್ತೇಜಿತರಾದರು. ಅವರಲ್ಲಿ ಅಂಬಿಗ ವೃತ್ತಿಯಲ್ಲಿ ಜೀವನ ಸಾಗಿಸುತ್ತಿದ್ದ ಅಂಬಿಗರ ಚೌಡಯ್ಯ ಶರಣರೂ ಒಬ್ಬರು. ಈಗಿನ ಧಾರವಾಡ ಜಿಲ್ಲೆಯ ಪೂರ್ವಗಡಿಯಲ್ಲಿ ಹರಿಯುತ್ತಿರುವ ತುಂಗಭದ್ರಾ ನದಿಯ ದಡದಲ್ಲಿರುವ 'ಚೌಡದಾನಪುರ' ಚೌಡಯ್ಯನವರ ಕಾಯಕಕ್ಕೆ ಆಶ್ರಯವಾಗಿದ್ದ ಊರು. ತುಂಗಭದ್ರೆಯ ಒಂದು ದಡದಿಂದ ಇನ್ನೊಂದು ದಡಕ್ಕೆ ಹರಿಗೋಲಿನಲ್ಲಿ ಜನರನ್ನು ದಾಟಿಸುವ 'ಅಂಬಿಗ ವೃತ್ತಿಯೇ' ಇವನು ಅನುಸರಿಸುತ್ತಿದ್ದ ಕಾಯಕ. ಕೆಳಸ್ತರದ ಕಾರ್ಮಿಕ ವರ್ಗದಲ್ಲಿ ಉದಯಗೊಂಡ ಈ ಕಾಯಕ ಸದ್ಭಾವಿಗೆ ಬಸವತತ್ತ್ವಾನುಯಾಮಿಯಾದ ಮಹಾವಿದ್ವಾಂಸ ಶಿವದೇವಯತಿಯಿಂದ ಶಿವಲಿಂಗದೀಕ್ಷೆಯಾಗಿತ್ತು. ವೀರಶೈವ ತತ್ತ್ವಾನುಷ್ಠಾನದಲ್ಲಿ ಜೀವಿಸುತ್ತಿದ್ದ ಈ ಮಹಾಶರಣನ ಗುಣ ಸ್ವಭಾವಗಳು, ಅನುಭಾವ ಆಲೋಚನೆಗಳು, ಅಭಿವ್ಯಕ್ತಿಗಳು ಇವನೊಬ್ಬ ಕಟ್ಟುಗ್ರದ ನಿಷ್ಠುರ ಶರಣನೆಂಬುದಾಗಿ ಸ್ಪಷ್ಟಪಡಿಸಿವೆ. ಈ ಕಾರಣವಾಗಿ ಇವನು ಬಹುದೊಡ್ಡ ವಚನಕಾರನೆನ್ನಿಸದಿದ್ದರೂ, ಬಹು ಜನಪ್ರಿಯ ವಚನಕಾರನೆಂಬ ಖ್ಯಾತಿಗಳಿಸಿವೆ. ಜನತೆಯಲ್ಲಿನ ಮೂಢನಂಬಿಕೆ ಅಜ್ಞಾನ ಅಪಮಾರ್ಗಗಳನ್ನು ಯಾವ ಅಳುಕು-ಅಂಜಿಕೆಗಳಿಲ್ಲದೆ ಕಠಿಣ ವಾಕ್ ಪ್ರಹಾರ ಮಾಡಿ, ಖಂಡಿಸಿ ಎಚ್ಚರಗೊಳಿಸುವ ಇವನು ಜನತೆಯನ್ನು ಆತ್ಮಶೋಧನೆಗೆ ತೊಡಗುವಂತೆ ಮಾಡುವ ಓರ್ವ ಶ್ರೇಷ್ಠ ಸಮಾಜ ಸುಧಾರಕನಾಗಿಯೇ ಕಾಣುತ್ತಾನೆ. ಒಮ್ಮೊಮ್ಮೆ ಇವನ ಸಾಮಾಜಿಕ ವಿಡಂಬನೆ ಆಕ್ರೋಶಾದಿಗಳು ಆತ್ಮಶೋಧನೆಯಾಗಿಯೂ ಅಭಿವ್ಯಕ್ತವಾಗಿವೆ.

ಆದರೆ ಲೋಕದಲ್ಲಿ ಕೆಲವು ಪ್ರಬುದ್ಧ ಚೇತನಗಳು ಸತ್ಯಕ್ಕೆ-ಸದಾಚಾರಕ್ಕೆ-ಸದ್ವೃತ್ತಿಗೆ-ಸದ್ವ್ಯವಹಾರಕ್ಕೆ ಭಂಗ ಬರತಕ್ಕ ಸಂದಿಗ್ಧ ಸಮಯದಲ್ಲಿ ತಡೆದುಕೊಳ್ಳಲಾಗದೆ ಸಾತ್ವಿಕ-ಕೋಪ ಪ್ರಕಟಿಸುವಾಗ ಕಾಠಿಣ್ಯಪೂರ್ಣ ನಿಷ್ಠುರ ನುಡಿಗಳನ್ನು ಬಳಸಿರುವುದೂ ಉಂಟು. ಬಸವಣ್ಣನವರಂಥ ಪ್ರಾಜ್ಞರೂ ಕೂಡ ಇದಕ್ಕೆ ಹೊರತಲ್ಲ. "ಆರು ಮುನಿದು ಎಮ್ಮನೇನು ಮಾಡುವರು! ಊರು ಮುನಿದು ಎಮ್ಮನೆಂತು ಮಾಡುವುದು, ಎಮ್ಮ ಕೂಸಿಗೆ ಕುನ್ನಿಯ ಕೊಡಬೇಡ! ಎಮ್ಮ ಸೊಣಗಂಗೆ ತಳಿಗೆಯನ್ನಿಕ್ಕಬೇಡ! ಆನೆಯ ಮೇಲೆ ಹೋಹನ ಶ್ವಾನ ಕಚ್ಚಬಲ್ಲುದೆ?" (ಬ.ವ. 752) "ಕೋಣನ ಹೇರಿಂಗೆ ಕುನ್ನಿ ಬುಸುಗುಡುತ್ತಬಡೆವಂತೆ". (ಬ.ವ. 662) "ಈಶ್ವರ ಸದ್ಭಾವೇ ಕಿಂ ಪ್ರಮಾಣಂ" ಎಂಬ ಮೀಮಾಂಸಕನ ಮೂಗಿನ ಕೊನೆಯನು ವಿಶ್ವತತ್ವಕ್ಷುರುತ ವಿಶ್ವತೋಮುಖೋ ವಿಶ್ವತೋಬಾಹುರುತ ವಿಶ್ವತಃಪಾತ್ ಸಬಾಹು ಭ್ಯಾಂ ಧಮತಿ ಸಂಪತ್ರೈಃ ದ್ಯಾವಾ ಭೂಮೀ ಜನಯನ್ ದೇವ ಏಕಃ-ಎಂಬ ಸುರಗಿಯಲಿರಿದು ವೈಶೀಕವೆಂಬ ಇಟ್ಟಿಗೆಯಲೊರಸಿ, ಕೂಡಲ ಸಂಗಯ್ಯನೆಂಬ

2. i) ದೇವಸಹಿತ ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಂಡೆನಾದರೆ ನಿಮ್ಮಾಣೆ, ನಿಮ್ಮ ಪುರಾತನರಾಣೆ! ತಲೆದಂಡ ತಲೆದಂಡ ಕೂ. ಸಂ. ದೇವಾ. ಭಕ್ತರ ಕುಲವನರಸಿದರೆ, ನಿಮ್ಮ ರಾಣೀವಾಸದಾಣೆ (ಬ.ವ.452)
ii) ಸೆಟ್ಟಿಯೆಂಬೆನೆ ಸಿರಿಯಾಳನ? ಮಡಿವಾಳನೆಂಬೆನೆ ಮಾಚಯ್ಯನ? ದೋಡಹಾರನೆಂಬೆನೆ ಕಕ್ಕಯ್ಯನ? ಮಾದಾರನೆಂಬೆನೆ ಚನ್ನಯ್ಯನ? ಆನು ಹಾರುವನೆಂದರೆ, ಕೂಡಲ ಸಂಗಮದೇವಯ್ಯ ನಗುವನಯ್ಯ. (ಬ.ವ.344)
iii) ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊರೆಯ ಹೊರಿಸಿದರಯ್ಯ, ಕಕ್ಕಯ್ಯ ನೊಕ್ಕದನಿಕ್ಕ; ದಾಸಯ್ಯ ಶಿವದಾನವನೆರೆಯ;...... ಚೆನ್ನಯ್ಯನೆನ್ನುವ ಮನ್ನಿಸ ;....... ಕೂ. ಸಂ. ದೇವಾ ಶಿವಧೋ! ಶಿವಧೋ!! (ಬ. ವ. 343)

3 i) ಜಂಬೂದ್ವೀಪ ನವಖಂಡ ಪೃಥ್ವಿಯೊಳಗೆ ಕೇಳಿರಯ್ಯ ಎರಡಾಳಿನ ಭಾಷೆಯ, ಕೊಲುವೆನೆಂಬ ಭಾಷೆ ದೇವನದು ; ಗೆಲುವೆನೆಂಬ ಭಾಷೆ ಭಕ್ತನದು; ಸತ್ಯವೆಂಬ ಕೂರಲಗನೆ ಕೊಂಡು ಸದ್ಭಕ್ತರು ಗೆದ್ದರು ಕಾಣಾ ಕೂಡಲ ಸಂಗಮದೇವಾ. (ಬ. ವ. 677)
ii) ಮುನ್ನಿನ ಕಲಿ ವೀರಧೀರರು ಕಾದಿದ ರಣಗಳನು ಪರಿಪರಿಯಲಿ ಬಣ್ಣಿಸಿ ಪೇಳಬಹುದಲ್ಲದೆ.... (ಬ. ವ. 978ನ್ನು ನೋಡಿ ಅರ್ಥೈಸಿಕೊಳ್ಳಿ) (ಈ ಎರಡೂ ವಚನಗಳು ಧ್ವನಿಪೂರ್ಣ)





ಕನ್ನಡಿಯ ತೋರುವೆನು". (ಬ.ವ. 747) ಇಲ್ಲಿನ ಬಸವಣ್ಣನವರ ಭುಗಿಲೆದ್ದ ಸಾತ್ವಿಕ ಕೋಪ ಅವರ ಬಾಯಿಂದ ಕುನ್ನಿ-ಸೊಣಗ-ಶ್ವಾನ-ಸುರಿಗಿಯಲಿರಿದು-ಇಟ್ಟಿಗೆಯಲೊರಸಿ.... ಇತ್ಯಾದಿ ಅತಿ ನಿಷ್ಠುರ ನುಡಿಗಳನ್ನಾಡಿಸಿದೆ. ಆದರೆ ಚೌಡಯ್ಯನಂತ ಕೆಳಸ್ತರದ ವರ್ಗದಲ್ಲಿ ಹುಟ್ಟಿ ಬೆಳೆದ ಓರ್ವ ಕಾಯಕ ಜೀವಿಯ ಬಾಯಿಂದ "ಹೊಲೆಯ-ಮಾದಿಗ-ಮೂಳ-ಖೊಟ್ಟಿಮೂಳ, ಎಡಪಾದರಕ್ಷೆ-ಕೆರ-ಪಾದುಕೆಯಿಂದ ಹೊಡೆ-ಒದೆ-ತುಳಿ-ನಾಯಿ-ಸೂಕರ-ಕೆಡವಿಹಾಕಿ ಮೂಗ ಕೊಯ್ಯಿ...." ಇತ್ಯಾದಿ ಅನೇಕಾನೇಕ ನೈಷ್ಠುರ್ಯಪೂರ್ಣ ಮಾತುಗಳ ಸರಮಾಲೆಯೇ ಹರಿದಿದೆ. ಯಾವ ವಚನಕಾರರೂ ಪ್ರಯೋಗಿಸದ ಇಷ್ಟೊಂದು ಕಟ್ಟುಗ್ರ ನುಡಿಗಳನ್ನು ಆಡಿದ ಚೌಡಯ್ಯನವರು, ಹರಿಗೋಲಿನಲ್ಲಿ ಭಕ್ತಜನತೆಯನ್ನು ಆಚೆಯ ದಡ ಮುಟ್ಟಿಸಲೂ ಬಲ್ಲವರು; ಆಚಾರ ವಿಚಾರ ಹೀನರನ್ನು ನುಡಿನದಿಯಲ್ಲಿ ಮುಳುಗಿಸಲೂ ಬಲ್ಲವರು, ಎನ್ನುವಂತೆ ಮಾಡಿವೆ. ಪ್ರಕೃತ ಅವರ ಕೆಳಗಿನ ಒಂದು ನಿಷ್ಠುರ ವಚನವನ್ನು ಕುರಿತು ಸಮಾಲೋಚಿಸುವುದು ಲೇಖನದ ಉದ್ದೇಶವಾಗಿದೆ:

"ಕುಲಹೀನ ಶಿಷ್ಯಂಗೆ ಅನುಗ್ರಹವ ಮಾಡಿ ಕೊನೆಗೆ ಅವನ
ಮನೆಯಲ್ಲಿ ಉಣಬಾರದೆಂದು ಅಕ್ಕಿ ಕಣಕವ ತಕ್ಕೊಂಡು ಹೋಗುವ
ಗುರುವ ಕಂಡೊಡೆ ಕೆಡವಿಹಾಕಿ, ಮೂಗನೆ ಕೊಯ್ದು, ಇಟ್ಟಿಗೆಯಿಂದ ತಿಕ್ಕಿ,
ಸಾಸಿವೆಹಿಟ್ಟನ್ನು ತಳೆದು, ಲಿಂಬೆಹುಳಿಯನ್ನು ಹಿಂಡಿ ಪಡವ ಗಾಳಿಗೆ
ಹಿಡಿಯೆಂದಾತ ನಮ್ಮ ಅಂಬಿಗರ ಚೌಡಯ್ಯ"

ವೀರಶೈವ ಸಿದ್ಧಾಂತದಲ್ಲಿ ಮನುಷ್ಯನು ದೀಕ್ಷಾಪೂರ್ವದಲ್ಲಿ ಯಾವುದೇ ಮತ-ಪಂಥ-ಕುಲ-ಜಾತಿ-ಧರ್ಮದವನಾಗಿರಲಿ ವೀರಶೈವ ಲಿಂಗದೀಕ್ಷಾ ಸಂಸ್ಕಾರದಿಂದ ಉಂಟಾಗುವ ಜನ್ಮವನ್ನು ಅಪ್ರಾಕೃತ ಜನ್ಮವೆಂದೂ ಕರೆಯಲಾಗುತ್ತಿದೆ. ಪ್ರಕೃತಿ ಸಂಬಂಧವಾದ ಮಾಂಸಪಿಂಡ-ಭೂತಕಾಯ-ವಾಯು-ಪ್ರಾಣ ಮೊದಲಾದುವು ಈ ದೀಕ್ಷಾಸಂಸ್ಕಾರದಿಂದ ಮಂತ್ರಪಿಂಡ-ಪ್ರಸಾದಕಾಯ-ಲಿಂಗ ಪ್ರಾಣಗಳಾಗುತ್ತವೆಂದು ನಂಬಿಕೆ. ಹೀಗಾದಾಗಲೇ ಜೀವನು ಅಂಗಪದ ವಾಚ್ಯ (ಶುದ್ಧ ಜೀವ)ನೆನಿಸುವನು. ಈ ಸಂಸ್ಕಾರಗೊಂಡವನ ಸಾಮಾನ್ಯ ಧರ್ಮವೇ ವೀರಶೈವ ಧಾರ್ಮಿಕ ಜಾತಿ. ಈ ಜಾತಿ ಮತ ಸಂಸ್ಕಾರಜನ್ಯವಾದದ್ದು. ವರ್ಣ ಸಂಸ್ಕಾರ ಜನ್ಯವಾದದ್ದಲ್ಲ. ದೀಕ್ಷಾರೂಪವಾದ ಗುರುವಿನ ಅನುಗ್ರಹವಾದ ಮೇಲೆ ಗುರುಶಿಷ್ಯರಿಬ್ಬರೂ ಸಮಾನರಾಗುತ್ತಾರೆ. ಅವರೀರ್ವರೂ ಸಮರಸ ಸದ್ಭಾವ ಪೂರ್ವಕ ತೀರ್ಥ-ಪ್ರಸಾದ ಸ್ವೀಕಾರ ಮಾಡಬೇಕು. ಹಾಗಲ್ಲದೆ ಶಿಷ್ಯನ ದೀಕ್ಷಾಂಗ ಪೂರ್ವದ ಕುಲಜಾತಿಯನ್ನು ಮನಸ್ಸಿನಲ್ಲಿಟ್ಟುಕೊಂಡು, ಅಲ್ಲಿ ಪ್ರಸಾದವನ್ನು ಕೊಟ್ಟುಕೊಳ್ಳದೆ ಗೋದಿಯ ಹಿಟ್ಟು, ಅಕ್ಕಿ, ಬೇಳೆ ಮೊದಲಾದ ಪರಿಕರ ತೆಗೆದುಕೊಂಡು ಹೋಗುವ ಗುರುವರ್ಗವನ್ನೆ ಜಡಿದು-ಜಂಕಿಸಿ ನುಡಿದಿದ್ದಾನೆ ಚೌಡಯ್ಯ ಶರಣ. ಇಂಥ ಗುರುಗಳ ಬಗೆಗೆ ಚೆನ್ನಬಸವಣ್ಣನವರೂ ಕೂಡ 'ಲಿಂಗವ ಮಾರಿ ಕೊಂಡುಂಬ ಭಂಗಗಾರರು' ಎಂದು ಬಹು ಮಾರ್ಮಿಕವಾಗಿ ಛೇಡಿಸಿರುವುದನ್ನು ಕಾಣಬಹುದಾಗಿದೆ. ಚೆನ್ನಬಸವಣ್ಣನವರ ಮಾತುಗಳೇ ಅಂಬಿಗರ ಚೌಡಯ್ಯನವರ ಈ ವಚನಕ್ಕೆ ಮೂಲವೆಂದೂ ಹೇಳಬಹುದು.[4]

"ಕುಲಹೀನ ಶಿಷ್ಯಂಗೆ ಅನುಗ್ರಹವ ಕೊಟ್ಟು ತನ್ನ ಪ್ರಾಣಲಿಂಗವ ನಿಕ್ಷೇಪಿಸಿ,
ಕರ್ಣದಲ್ಲಿ ಮಂತ್ರವ ಹೇಳಿ, ಆ ಶ್ರೀಗುರು ಬಂದು ಆ ಶಿಷ್ಯನ ಮನೆಯ
ಹೊಗಲೊಲ್ಲದೆ, ಅಕ್ಕಿ ತುಪ್ಪವನೀಸಿಕೊಂಬುವನ ಕೇಡಿಂಗೆ ಇನ್ನೇವೆನಯ್ಯಾ!
ತನ್ನ ಪ್ರಾಣಲಿಂಗವ ಕೊಟ್ಟು ತಾ ಹುಗೆನೆಂಬ ವ್ರತಗೇಡಿಯನಿನ್ನೇನೆನ ಬಹು
ದಯ್ಯಾ! ಅವನ ಧನಕ್ಕೆ ತಂದೆಯಾದನಲ್ಲದೆ ಅವನಿಗೆ ತಂದೆಯಾದುದಿಲ್ಲ.
ಇದು ಕಾರಣ ಕೂಡಲ ಚನ್ನಸಂಗಯ್ಯಾ, ಆ ಲಿಂಗವ ಮಾರಿಕೊಂಡುಂಬ
ಭಂಗಗಾರ ಕೆಟ್ಟ ಕೇಡನೇನೆಂಬೆನಯ್ಯಾ!"

**(ಚೆ.ಬ.ವಚನ 631)**

ಭಾವೋದ್ವೇಗದ ತೀವ್ರತೆಯ ದೃಷ್ಟಿಯಿಂದ ಚೌಡಯ್ಯನವರ ವಚನವನ್ನೂ ಚೆನ್ನಬಸವಣ್ಣನವರ ವಚನವನ್ನು ತೂಗಿ ನೋಡಿದಾಗ ಚೌಡಯ್ಯನವರ ಬಗೆಗೆ ನಾವು ಹೇಳಿರುವ ರೀತಿ ಹೇಗಾದರೂ ಇರಲಿ; ಹೇಳಿರುವುದು ಸತ್ಯವೇ ಅಲ್ಲವೇ! ಎಂದು ಸಮಾಧಾನಪಟ್ಟುಕೊಳ್ಳಬೇಕಾಗುತ್ತದೆ. 'ನ್ಯಾಯ ನಿಷ್ಠುರಿ ಶರಣನಾರಿಗೂ ಅಂಜುವವನಲ್ಲ' ಮತ್ತು 'ನ್ಯಾಯ ನಿಷ್ಠುರಿದಯಾ

4 ಶ್ರೀ ಚನ್ನಬಸವಣ್ಣನವರು ಈ ಸಂಬಂಧದಲ್ಲಿ ಅನೇಕ ಬಗೆಯಲ್ಲಿ ವಿವರಿಸಿರುವುದನ್ನು ಕಾಣಬಹುದು.

1) ತನ್ನ ಮನೆಯ ಹೊಗದ ಗುರುವನರಿಕೊಂಡು ಹೋಹಾತ ಶಿಷ್ಯನಲ್ಲ; ತಾ ಹೊಗದ ಮನೆಯವರಿಗೆ ಕಾರುಣ್ಯ ಉಪದೇಶವ ಮಾಡುವಾತ ಗುರುವಲ್ಲ. ಅಂಗವ ಮಾರಿಕೊಂಡುಂಬ ಶಿಷ್ಯ ಗುರುದ್ರೋಹಿ; ಲಿಂಗವ ಮಾಡಿಕೊಡುಂಬ ಗುರು ಶಿವದ್ರೋಹಿ ... ಈ ಗುರುಶಿಷ್ಯರಿಬ್ಬರ ಭಕ್ತರೆಂದವರ ಕೂಡಲಚನ್ನಸಂಗಯ್ಯ ನಾಯಕನರಕದಲ್ಲಿಕ್ಕುವ.

2) ಭೂತ ಪ್ರಾಣಿಯ ಕಳೆದು ಲಿಂಗಪ್ರಾಣಿಯ ಮಾಡಿದ ಬಳಿಕ ಆ ಶಿಷ್ಯನೇ ಜಂಗಮನಾಗಿ ಗುರುವಿನ ಮಠಕ್ಕೆ ನಡೆದು ಬಂದಡೆ, ಗುರುವೆಂಬ ಹಮ್ಮಿಲ್ಲದೆ ಎನ್ನ ಪರಮಗುರುವೆಂದು ಪಾದಾರ್ಚನೆಯ ಮಾಡುವುದು ಆಚಾರ, ನಾಚಿಮಾಡದಿರ್ದಡೆ ನಾಯಕನರಕ. ಆ ಜಂಗಮ ಶಂಕೆಯಿಲ್ಲದೆ ಪಾದಾರ್ಚನೆಯ ಮಾಡಿಸಿಕೊಂಬುದೇ ಕರ್ತೃತ್ವ; ಶಂಕೆಗೊಂಡಡೆ ಮಹಾಪಾತಕ. ಹೀಗಲ್ಲದೆ ಗುರುವೆಂಬ ಹಮ್ಮು ಶಿಷ್ಯನೆಂಬ ಶಂಕೆ ಉಳ್ಳನ್ನಬರ ರೌರವನರಕದಲ್ಲಿಕ್ಕುವ ಕೂಡಲಸಂಗಮದೇವ.

ದಾಕ್ಷಿಣ್ಯಪರ ನಾನಲ್ಲವಯ್ಯ'.... ಇತ್ಯಾದಿಯಾಗಿ ಹೇಳುವ ಬಸವಣ್ಣನವರ ಮಾತುಗಳನ್ನು ಚೌಡಯ್ಯನವರಿಗೂ ಅನ್ವಯಿಸಿಕೊಳ್ಳಬೇಕಾಗುತ್ತದೆ. ಇದೇನೇ ಇರಲಿ, ವಚನ ವಾಙ್ಮಯದಲ್ಲಿ ಮತದೊಡನೆ ವರ್ಣಾಶ್ರಮಧರ್ಮವನ್ನು ಶರಣರು ಅಂಗೀಕರಿಸುವುದೇ ಇಲ್ಲ. ಇಷ್ಟೇ ಅಲ್ಲದೆ ಲಿಂಗಾಂಗ ಸಾಮರಸ್ಯ ರೂಪವಾದ ಮೋಕ್ಷಕ್ಕೆ ಮತ ಧರ್ಮವೇ ಮುಖ್ಯವಲ್ಲದೆ ತರತಮ ಭಾವದಿಂದ ಭೇದ ಕಲ್ಪಿಸುವ ವರ್ಣಾಶ್ರಮ ಧರ್ಮದ ಉಪಯೋಗವಿಲ್ಲವೆಂಬುದು ಹೆಜ್ಜೆ ಹೆಜ್ಜೆಗೂ ವ್ಯಕ್ತಪಟ್ಟಿದೆ. ವರ್ಣಆಶ್ರಗಳಿಗತೀತವಾದ ಮತಧರ್ಮವೇ ವೀರಶೈವದ ಶುದ್ಧ ಸಂಪ್ರದಾಯವೆಂದು ವಚನಗಳ ಸಂದೇಶ. ಕಾಯಕವಾವುದೇ ಇರಲಿ, ಪೂರ್ವಾಶ್ರಯ ಎಂತೇ ಇರಲಿ, ಲಿಂಗ ಸಂಸ್ಕಾರ ಮೂಲಕವಾದ ದೀಕ್ಷೆಗೊಂಡವರೆಲ್ಲ ಸಮಾನರೆಂದು ಸಾರುವುದರ ಮೂಲಕವೇ ಅವರು ಹಿಂದೂ ಸಮಾಜದಲ್ಲಿಯ ಅನೇಕ ಭೇದಗಳ ಭದ್ರಕೋಟೆಯನ್ನು ಒಡೆದುಹಾಕಿ ಒಂದು ಸುಂದರ ಸಮಾಜದ ಜನಾಂಗ ಕಟ್ಟಲು ಪ್ರಯತ್ನಪಟ್ಟಿರುವುದನ್ನು ಕಾಣುತ್ತೇವೆ. ಅಂಬಿಗರ ಚೌಡಯ್ಯ ವೃತ್ತಿಯಲ್ಲಿ ಅಂಬಿಗನಾಗಿರಬಹುದು, ಗುರ್ವನುಗ್ರಹಕ್ಕೆ ಪಾತ್ರವಾಗಿ ಗುರುಪುತ್ರನೇ ಆದ ಮೇಲೆ ಶೈವಪದ್ಧತಿಯಂತೆ ನಡೆಯುತ್ತ, ಭಕ್ತನ ಮನೆಯ ಪಡಿಪದಾರ್ಥಗಳಿಂದ ಹೊಟ್ಟೆ ಹೊರೆಯುವ ಗುರುವರ್ಗದ ನಡೆನುಡಿಗಳನ್ನು ಸಹಿಸುವುದಾದರೂ ಹೇಗೆ? ಅವನ ಸಾತ್ವಿಕ ಕೋಪವಿಲ್ಲಿ ಭುಗಿಲೆಂದು ಮೇಲೆದ್ದು ಕೆಂಡ ಕಾರಿದೆ ಎನ್ನಬಹುದು.



## ಸಂತಾಪ

ಕಾಂತಿ ಕಾಯಕದ ಶರಣ ವಿ. ಎಸ್. ಶಿವಲಿಂಗಯ್ಯನವರು ದಿನಾಂಕ 24-5-1998ರಂದು ಲಿಂಗೈಕ್ಯರಾದುದನ್ನು ತಿಳಿದು 'ಸಿದ್ಧಗಂಗಾ' ಅತೀವ ದುಃಖಕ್ಕೊಳಗಾಯಿತು.

ಬೆಂಗಳೂರು ಜಿಲ್ಲೆ ರಾಮನಗರ ತಾಲ್ಲೂಕಿನ ವಿಭೂತಿ ಕೆರೆಯಲ್ಲಿ 1922ರಲ್ಲಿ ಜನಿಸಿದ ಶಿವಲಿಂಗಯ್ಯನವರು ಆಚಾರನಿಷ್ಠರಾಗಿ, ಸುಸಂಸ್ಕೃತ ಜೀವನ ನಡೆಸಿದರು. ಗುರುಲಿಂಗ ಜಂಗಮ ಪ್ರೇಮಿಗಳಾಗಿ ಬಸವತತ್ವ ಪ್ರೇಮಿಗಳಾಗಿ ಬಾಳಿದರು. ಶ್ರೀಯುತರು ತಮ್ಮ ಪುತ್ರರಾದ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಅಧೀಕ್ಷಕರಾಗಿ ಸೇವೆ ಸಲ್ಲಿಸುತ್ತಿರುವ ಶ್ರೀ ಸಿದ್ಧಲಿಂಗಯ್ಯ ಮತ್ತು ಬೆಂಗಳೂರಿನ ಸರ್ಕಾರಿ ಕಾಲೇಜಿನಲ್ಲಿ ಆಂಗ್ಲ ಭಾಷಾ ಪ್ರಾಧ್ಯಾಪಕರಾಗಿರುವ ಶ್ರೀ ಪರಶಿವಮೂರ್ತಿ ಅವರನ್ನು ಅಗಲಿದ್ದಾರೆ. ಅರಮನೆ ಗುರುಮನೆಗಳ ಗೌರವಾದರಗಳನ್ನು ಗಳಿಸಿದ್ದ ಶಿವಲಿಂಗಯ್ಯನವರು ಕಾಂತಿಕಾಯಕವನ್ನು ಅಂದರೆ ಇಷ್ಟಲಿಂಗಗಳಿಗೆ ಚಿದ್ರಸವಿಡುವ ಅಥವಾ ಕಂತೆಯಿಡುವ ಧಾರ್ಮಿಕ ಕಾಯಕವನ್ನು ಅಂಗನಿಷ್ಠೆಯಿಂದ ನಡೆಸಿದರು. ಬೆಂಗಳೂರಿನ ಸರ್ಪಭೂಷಣ ಮಠದಲ್ಲಿ ಮೂವತ್ತು ವರ್ಷಗಳ ಕಾಲ ಕಾಂತಿಕಾಯಕ ನಿರತರಾಗಿ ಪೂಜ್ಯ ಶ್ರೀ ಮಲ್ಲಿಕಾರ್ಜುನಸ್ವಾಮಿಗಳ ಕೃಪಾ ಪಾತ್ರರಾಗಿ, ಕೊನೆಯ ಕಾಲದಲ್ಲಿ ಶ್ರೀ ಸಿದ್ಧಗಂಗಾಮಠದ ಪ್ರಶಾಂತ ಪರಿಸರದಲ್ಲಿ ಕಳೆದರು. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ಕಾರುಣ್ಯಾನುಗ್ರಹಕ್ಕೆ ಪಾತ್ರರಾದ ಶರಣಶಾಂತರು. ಸಜ್ಜನಿಕೆ, ನೇರನುಡಿ, ಪ್ರಸಾದನಿಷ್ಠೆ, ಶರಣಗೋಷ್ಠಿಗಳಲ್ಲಿ ಆಸಕ್ತಿ ಬೆಳೆಸಿಕೊಂಡಿದ್ದ ಶ್ರೀಯುತರು ಕಾಂತಿ ಕಾಯಕಕ್ಕೆ ಗೌರವವನ್ನು ತಂದು ಕೊಟ್ಟಿದ್ದರ ಜೊತೆಗೆ ಹಲವಾರು ಶಿಷ್ಯರನ್ನು ರೂಪಿಸಿದ್ದು ಸ್ಮರಣೀಯವಾದುದು.

ಲಿಂಗದೊಳಗಾದ ಶಿವಲಿಂಗಯ್ಯನವರ ಆತ್ಮಕ್ಕೆ ಭಕ್ತಿನಮನಗಳನ್ನು ಅರ್ಪಿಸುತ್ತ, ಅವರ ಕುಟುಂಬ ವರ್ಗದವರಿಗೆ ಅಗಲಿಕೆಯ ದುಃಖವನ್ನು ಸಹಿಸುವ ಶಕ್ತಿಯನ್ನು ಬಸವಾದಿ ಪ್ರಮಥರು ಮತ್ತು ಶ್ರೀ ಸಿದ್ಧಗಂಗಾ ಗುರುಪರಂಪರೆ ನೀಡಲೆಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.







# ವಿದ್ಯೆ - ದೀಪ

-- ಪ್ರೊ. ಎಲ್. ಎಸ್. ಶೇಷಗಿರಿರಾವ್
257, 3ನೇ ಬಡಾವಣೆ, ಜಯನಗರ,
ಬೆಂಗಳೂರು-560 011

ವಿದ್ಯಾವಂತನು ಯಾವುದೇ ಸನ್ನಿವೇಶವನ್ನು ಅಥವಾ ಪ್ರಶ್ನೆಯನ್ನು ನೋಡುವ ರೀತಿಯೇ ಅವನ ವಿದ್ಯೆಗೆ ಸಾಕ್ಷಿಯಾಗಿರುತ್ತದೆ. 'ಸಿವಿಲೆಜೇಷನ್' ಅಥವಾ ನಾಗರಿಕತೆ ಎನ್ನುವುದು ಒಂದು ಮನೋಧರ್ಮವೂ ಹೌದು,ಒಂದು ವ್ಯವಸ್ಥೆಯೂ ಹೌದು. ವಿದ್ಯಾಸಂಸ್ಥೆಗಳು, ನ್ಯಾಯಾಲಯಗಳು, ಕಲಾಕೇಂದ್ರಗಳು, ಗ್ರಂಥಭಂಡಾರಗಳು, ಜನತೆಯ ಅಭಿಪ್ರಾಯವನ್ನು ಪ್ರತಿಬಿಂಬಿಸುವ ಸಂಸ್ಥೆಗಳು ಎಲ್ಲ ಈ ವ್ಯವಸ್ಥೆಯ ಅಂಗಗಳು. ಈ ವ್ಯವಸ್ಥೆಯನ್ನು ಸಾರ್ಥಕವಾಗಿ ಉಳಿಸಿಕೊಂಡು ಬೆಳೆಸಿಕೊಂಡು ಬರುವ ಮನೋಧರ್ಮ ಇದರ ಉಸಿರು.

ಜವಾಹರಲಾಲ್ ನೆಹರು ಅವರು ಒಂದು ವಿಶ್ವವಿದ್ಯಾನಿಲಯಕ್ಕೆ ಭೇಟಿ ಕೊಟ್ಟಾಗ ವಿದ್ಯಾರ್ಥಿಗಳನ್ನು ಉದ್ದೇಶಿಸಿ ಭಾಷಣ ಮಾಡಿದರು. ಒಂದು ದೇಶಕ್ಕೆ ವಿಶ್ವವಿದ್ಯಾಲಯಗಳು ಏಕೆ ಬೇಕು ಎನ್ನುವ ಪ್ರಶ್ನೆಯನ್ನು ಕೇಳಿಕೊಂಡು, ಅವರೇ ಉತ್ತರ ಕೊಟ್ಟರು. ಸಾಮಾನ್ಯವಾಗಿ ಈ ಪ್ರಶ್ನೆಗೆ ಕೊಡುವ ಉತ್ತರಗಳನ್ನು ಅವರು ಕೊಡಲಿಲ್ಲ. ಅವರ ಉತ್ತರ ಬಹು ಕುತೂಹಲಕಾರಿಯಾಗಿತ್ತು. ಅವರೆಂದರು, "ಒಂದು ದೇಶದಲ್ಲಿ ಯಾವುದೇ ಮುಖ್ಯವಾದ ವಿಷಯವನ್ನು ಆವೇಶವಿಲ್ಲದೆ, ಒಂದು ಪಕ್ಷ ಅಥವಾ ಗುಂಪಿಗೆ ನಿಷ್ಠೆ ಇಲ್ಲದೆ ಚರ್ಚೆ ಮಾಡಲು ಸಾಧ್ಯವಿರಬೇಕು. ವಿಷಯವನ್ನು ಕೂಲಂಕಷವಾಗಿ ತಿಳಿದುಕೊಂಡು, ಸಮಗ್ರ ದೃಷ್ಟಿಯಿಂದ ಆರ್ಭಟ ಕಾವುಗಳಿಲ್ಲದೆ ವಿಚಾರವಿನಿಮಯ ಮಾಡಿಕೊಳ್ಳಲು ಸಾಧ್ಯವಿರಬೇಕು. ಶಾಂತವಾಗಿ, ವಿವೇಕದಿಂದ, ದೂರದೃಷ್ಟಿಯಿಂದ ಅತ್ಯಂತ ವಿವಾದಾಸ್ಪದವಾದ ವಿಷಯ ಗಳನ್ನೂ ಚರ್ಚಿಸಿ ತೀರ್ಮಾನ ಮಾಡಿಕೊಳ್ಳಲು ಒಂದು ದೇಶದಲ್ಲಿ ಒಂದೇ ತಾಣವೂ ಇಲ್ಲವಾದರೆ ಅದೆಂತಹ ದೇಶ? ಅಲ್ಲಿ ವಿವೇಕಯುತವಾದ ತೀರ್ಮಾನಗಳನ್ನು ಕೈಗೊಳ್ಳುವುದು ಹೇಗೆ ಸಾಧ್ಯ?" ಪ್ರಶಾಂತವಾದ ವಾತಾವರಣದಲ್ಲಿ ಶಾಂತ ಮನಸ್ಸಿನಿಂದ ಜ್ವಲಂತ ಸಮಸ್ಯೆಗಳನ್ನೂ ಅತ್ಯಂತ ಉದ್ರೇಕಕಾರಿಯಾದ ವಿಷಯಗಳನ್ನೂ ವಿಶ್ಲೇಷಿಸಿ ಮಾರ್ಗದರ್ಶನ ಮಾಡುವ ವಿವೇಕದ ತವರಾಗಬೇಕು ವಿಶ್ವವಿದ್ಯಾನಿಲಯ.

ಹತ್ತು ಬೃಹತ್ ಸಂಪುಟಗಳಲ್ಲಿ ಮಾನವನ ನಾಗರಿಕತೆಯ ಇತಿಹಾಸವನ್ನು ಬರೆದ ಎಲ್ ಡ್ಯು ರಾಂಟ್, 'Education is the transmission of Civilization' ಎಂದು ಹೇಳಿದ. ಶಿಕ್ಷಣದ ಸ್ವರೂಪವನ್ನು ಕುರಿತ ಸೊಗಸಾದ ಮಾತುಗಳಲ್ಲಿ ಇದು ಒಂದು. ವಿದ್ಯಾವಂತನು ಯಾವುದೇ ಸನ್ನಿವೇಶವನ್ನು ಅಥವಾ ಪ್ರಶ್ನೆಯನ್ನು ನೋಡುವ ರೀತಿಯೇ ಅವನ ವಿದ್ಯೆಗೆ ಸಾಕ್ಷಿಯಾಗಿರುತ್ತದೆ. 'ಸಿವಿಲೆಜೇಷನ್' ಅಥವಾ ನಾಗರಿಕತೆ ಎನ್ನುವುದು ಒಂದು ಮನೋಧರ್ಮವೂ ಹೌದು, ಒಂದು ವ್ಯವಸ್ಥೆಯೂ ಹೌದು. ವಿದ್ಯಾಸಂಸ್ಥೆಗಳು, ನ್ಯಾಯಾಲಯಗಳು, ಕಲಾಕೇಂದ್ರಗಳು, ಗ್ರಂಥಭಂಡಾರಗಳು, ಜನತೆಯ ಅಭಿಪ್ರಾಯವನ್ನು ಪ್ರತಿಬಿಂಬಿಸುವ ಸಂಸ್ಥೆಗಳು ಎಲ್ಲ ಈ ವ್ಯವಸ್ಥೆಯ ಅಂಗಗಳು. ಈ ವ್ಯವಸ್ಥೆಯನ್ನು ಸಾರ್ಥಕವಾಗಿ ಉಳಿಸಿಕೊಂಡು ಬೆಳೆಸಿಕೊಂಡು ಬರುವ ಮನೋಧರ್ಮ ಇದರ ಉಸಿರು. ಘರ್ಷಣೆ, ಶೋಷಣೆಗಳನ್ನು ತಡೆಗಟ್ಟಿ, ಪ್ರತಿ ಮನುಷ್ಯನ ವ್ಯಕ್ತಿತ್ವ ಅರಳುವುದಕ್ಕೆ, ಸಮುದಾಯದ ಬದುಕು ಸ್ನೇಹ ಸಹಕಾರಗಳ ನೆಲದಲ್ಲಿ ಬೆಳೆಯುವುದಕ್ಕೆ, ನೆರವಾಗುವ ಮನೋಧರ್ಮ ನಾಗರಿಕತೆಯ ಪ್ರಾಣ. ಮನುಷ್ಯನ ನಾಗರಿಕತೆಗೆ ಹತ್ತು ಸಾವಿರ ವರ್ಷ ವಯಸ್ಸು. ನರವಾನರ ಎಂದು ಕರೆಯಬಹುದಾದ ಪ್ರಾಣಿ ಸುಮಾರು ಭೂಗ್ರಹದ ಮೇಲೆ ಎರಡೂವರೆ ಕೋಟಿ ವರ್ಷಗಳ ಹಿಂದೆ ಕಾಣಿಸಿಕೊಂಡ. ಮನುಷ್ಯ ಭೂಮಿಯ ಮೇಲೆ ವಾಸಮಾಡಲು ಪ್ರಾರಂಭ ಮಾಡಿದಾಗಿನಿಂದ ಕಳೆದಿರುವ ಕಾಲಮಾನ,

ಮನುಷ್ಯನ ನಾಗರಿಕತೆಯ ವಯಸ್ಸು ಇವನ್ನು ಸುಲಭವಾಗಿ ಮನದಟ್ಟು ಮಾಡಲು ವಿಜ್ಞಾನಿಗಳು ಒಂದು ಚಿತ್ರವನ್ನು ಕೊಡುತ್ತಾರೆ. ಎಪ್ಪತ್ತು ಅಡಿ ಕಂಬದ ಮೇಲೆ ಒಂದು ಅಂಚೆಚೀಟಿಯ ದಪ್ಪ ನಾಗರಿಕತೆಯ ವಯಸ್ಸನ್ನು ತೋರಿಸುತ್ತದೆ ಎಂದರೆ ಎಷ್ಟೋ ಕಾಲ ಮನುಷ್ಯ ಹೇಗೋ ಬದುಕಿದ್ದ. ನಂತರ ಇಲ್ಲೊಂದು ಕಡೆ, ಅಲ್ಲೊಂದು ಕಡೆ, ಸುಮೇರಿಯದಲ್ಲಿ, ಈಜಿಪ್ಟಿನಲ್ಲಿ, ಹೀಗೆ ಈ ವಿಶಾಲವಾದ ಭೂಮಿಯ ಮೇಲೆ ಬದುಕನ್ನು ಉತ್ತಮಗೊಳಿಸುವ ಪ್ರಯತ್ನಗಳು ಫಲಕೊಡಲು ಪ್ರಾರಂಭಿಸಿದವು. ಘೋರ ಕ್ಷಾಮಗಳು, ಭೀಕರ ಭೂಕಂಪಗಳು, ಪ್ರವಾಹಗಳು, ಸಾಂಕ್ರಾಮಿಕ ಜಾಡ್ಯಗಳು, ಭಯಂಕರ ಯುದ್ಧಗಳು, ಮನುಷ್ಯನೇ ಇಟ್ಟ ತಪ್ಪು ಹೆಜ್ಜೆಗಳು, ನಡೆಸಿದ ಮೂರ್ಖ ಹೋರಾಟಗಳು ಇವುಗಳ ನಡುವೆಯೂ ಕೆಲವರು ವಿವೇಕಿಗಳ ಪ್ರಯತ್ನದಿಂದ ನಾಗರಿಕತೆ ಉಳಿದು ಬಂದಿದೆ. ಎಲ್ಲ ಭೀಕರ ಮಾರುತಗಳ ನಡುವೆಯೂ ಈ ದೀಪ ಉರಿಯುತ್ತಿದೆ. ಎರಡೂವರೆ ಲಕ್ಷ ವರ್ಷಗಳ ಹಂಬಲ, ಹತ್ತು ಸಾವಿರ ವರ್ಷಗಳ ಶ್ರಮ ಈ ಪಿತ್ರಾರ್ಜಿತಕ್ಕೆ ವಾರಸುದಾರರ ಇವತ್ತಿನ ಮನುಷ್ಯ.

ರವೀಂದ್ರನಾಥ ಠಾಕೂರರು ಒಮ್ಮೆ ಹೇಳಿದರು, "Man is the worst animal when he is an animal" ಮನುಷ್ಯ ಅನಾಗರಿಕನಾಗಿ ನಡೆದುಕೊಂಡಾಗ ಯಾವ ಹುಲಿಯೂ ಅವನಷ್ಟು ಕ್ರೂರಿಯಲ್ಲ, ಯಾವ ತೋಳಕ್ಕೂ ಅವನಷ್ಟು ಹಸಿವಿಲ್ಲ. ಯಾವ ನರಿಯೂ ಅವನನ್ನು ಕುಯುಕ್ತಿಯಲ್ಲಿ ಸರಿಗಟ್ಟಲಾರದು. ಜರ್ಮನಿಯ ಒಬ್ಬ ಐಕ್‌ಮನ್ ವಿಷವಾಯುವನ್ನು ಪ್ರಯೋಗಿಸಿ ಐವತ್ತು ಲಕ್ಷಕ್ಕೂ ಹೆಚ್ಚು ಜನರನ್ನು ಕೊಂದ. ಇಡೀ ದೇಶಗಳ ಕೌರ್ಯ, ಸ್ವಾರ್ಥಗಳ ಹಾದಿ ಹಿಡಿದದ್ದನ್ನು ಕಂಡಿದ್ದೇವೆ. ನಾಗರಿಕತೆಯ ಬಿರುಗಾಳಿಗಳನ್ನು ಎದುರಿಸಿ ಉರಿಯುತ್ತಿರುವ ದೀಪ; ವ್ಯಕ್ತಿ, ಸಮುದಾಯ, ಮನುಷ್ಯಕುಲ ಉಳಿಯಲು ಅನಿವಾರ್ಯವಾದ ದೀಪ. ಈ ದೀಪವನ್ನು ಉಳಿಸಬೇಕಾದವರು ವಿದ್ಯಾವಂತರು. ಎಲ್ ಡ್ಯು ರಾಂಟ್ ಹೇಳಿದಂತೆ, ನಾಗರಿಕತೆಯ ಅವಿಚ್ಛಿನ್ನ ಪ್ರವಾಹವೇ ಶಿಕ್ಷಣ. ●

## ಗ್ರಾಮಾಂತರ ಬಸವ ಜಯಂತಿಯಲ್ಲಿ ಸಹಕರಿಸಿದ ಪುಣ್ಯ ಗ್ರಾಮಗಳು

| ದಿನಾಂಕ | ಗ್ರಾಮ |
|---|---|
| 6-4-98 | ಅಡಿಗೆರೆ - ಕಡೂರು ತಾಲ್ಲೂಕು |
| 9-4-98 | ನಾರಾಯಣಪುರ - ದೇವನಹಳ್ಳಿ ತಾಲ್ಲೂಕು |
| 10-4-98 | ಗುಂಡಾಂಜನೇಯ ಸ್ವಾಮಿ ದೇವಾಲಯ - ಕೆಮ್ಮಡ್ಡಿಗಾನಹಳ್ಳಿ - ಹೊಸಕೋಟೆ |
| 12-4-98 | ಸುಂದರಕುಪ್ಪೆ - ಕೊತ್ತಗೆರೆ ಹೋಬಳಿ - ಕುಣಿಗಲ್ ತಾಲ್ಲೂಕು |
| 14-4-98 | ಚಿಕ್ಕಗಂಗವಾಡಿ - ಕೂಟಗಲ್ ಹೋಬಳಿ - ರಾಮನಗರ ತಾಲ್ಲೂಕು |
| 28-4-98 | ಬಂಗಾರಪೇಟೆ - ಕೋಲಾರ ಜಿಲ್ಲೆ |
| 2-5-98 | ಜಂಗಮಮಠ - ಮಾಕನಹಳ್ಳಿ - ತುಮಕೂರು ತಾಲ್ಲೂಕು |
| 4-5-98 | ಬಸವನಹಳ್ಳಿ - ಕಳ್ಳಂಬೆಳ್ಳ ಹೋಬಳಿ - ಶಿರಾ ತಾಲ್ಲೂಕು |
| 7-5-98 | ಪುಟ್ಟಸಂದ್ರ - ಕೊರಟಗೆರೆ ತಾಲ್ಲೂಕು |
| 8-5-98 | ಪಿ. ಜಿ ಪಾಳ್ಯ - ಕೊಳ್ಳೆಗಾಲ ತಾಲ್ಲೂಕು |
| 13-5-98 | ಹಾಗಲವಾಡಿ - ಗುಬ್ಬಿ ತಾಲ್ಲೂಕು |
| 14-5-98 | ಐ.ಡಿ. ಹಳ್ಳಿ - ಮಧುಗಿರಿ ತಾಲ್ಲೂಕು |
| 15-5-98 | ಭಕ್ತರಹಳ್ಳಿ - ಕೋಳಾಲ ಹೋಬಳಿ, ಕೊರಟಗೆರೆ ತಾಲ್ಲೂಕು |
| 18-5-98 | ಯಲ್ಲಾಪುರ - ಗುಬ್ಬಿತಾಲ್ಲೂಕು |
| 24-5-98 | ಪವಾಡದ ಬಸವಣ್ಣದೇವರ ಮಠ - ನೆಲಮಂಗಲ |
| 28-5-98 | ಮಲ್ಲೇನಹಳ್ಳಿ - ದುದ್ದ ಹೋಬಳಿ - ಮಂಡ್ಯ ಜಿಲ್ಲೆ |
| 30-5-98 | ಆದ್ರಿಪುರ - ದೊಡ್ಡಬಳ್ಳಾಪುರ ತಾಲ್ಲೂಕು |
| 31-5-98 | ಮೂಡಲ ಪಾಳ್ಯ - ಬೆಂಗಳೂರು |







# ಪರಿಸರ ಮಾಲಿನ್ಯದ ಕೊಡುಗೆ ಮಲೇರಿಯಾ

- ಡಾ. ಎಂ. ಎಸ್. ರಾಜಣ್ಣ,
ಪ್ರಾಧ್ಯಾಪಕರು, ಸಮುದಾಯ ವೈದ್ಯ ಶಾಸ್ತ್ರ ವಿಭಾಗ,
ಕೆಂಪೇಗೌಡ ಮೆಡಿಕಲ್ ಕಾಲೇಜು, ಬೆಂಗಳೂರು.

*ಒಂದು ಗಂಭೀರ ಸಮಸ್ಯೆಯಾಗಿ ಕಾಡುತ್ತಿರುವ ಮಲೇರಿಯಾ ಅನಾಫಿಲಿನ್ ಜಾತಿಯ ಸೊಳ್ಳೆಗಳಿಂದ ಹರಡುವ ಸಾಂಕ್ರಾಮಿಕ ರೋಗ. ಈಗ ಮಲೇರಿಯಾ ರೋಗದ ನಿರ್ಮೂಲನೆ ಒಂದು ಸವಾಲಾಗಿ ಪರಿಣಮಿಸಿದೆ. ಅಂಕಿ ಅಂಶಗಳ ಪ್ರಕಾರ ಕರ್ನಾಟಕದಲ್ಲಿ 1995ರಲ್ಲಿ 2.85 ಲಕ್ಷ ಮಲೇರಿಯಾ ರೋಗಿಗಳನ್ನು ಗುರುತಿಸಲಾಗಿದೆ. ಮಲೇರಿಯಾ ಜ್ವರಕ್ಕೆ ಸೂಕ್ತ ಚಿಕಿತ್ಸೆ ಪಡೆಯದೆ ಇದ್ದರೆ ರೋಗಿ ಸಾವನ್ನಪ್ಪುವ ಸಂದರ್ಭವೂ ಉಂಟು. ಪ್ರಸಕ್ತ ಲೇಖನದಲ್ಲಿ ಲೇಖಕರು ಮಲೇರಿಯಾ ರೋಗ ಹರಡಲು ಕಾರಣ ಹಾಗೂ ನಿಯಂತ್ರಣ ಮೊದಲಾದ ವಿಷಯಗಳ ಬಗ್ಗೆ ಪರಿಚಯ ಮಾಡಿಕೊಟ್ಟಿದ್ದಾರೆ.*

ಮಲೇರಿಯಾ ರೋಗವನ್ನು ಕೇವಲ ಚಳಿಜ್ವರ ಉಂಟು ಮಾಡುವ ರೋಗ ಎಂದು ಉದಾಸೀನ ಮಾಡಬಾರದು. ಏಕೆಂದರೆ ಮಲೇರಿಯಾದಿಂದ ಸಾವು ಉಂಟಾಗಬಹುದು. 1953ನೇ ಇಸವಿಗೆ ಮೊದಲು ಮಲೇರಿಯಾ ರೋಗದಿಂದ ಪ್ರತಿವರ್ಷ 8 ಲಕ್ಷ ಮಂದಿ ಮರಣ ಹೊಂದುತ್ತಿದ್ದರು. ವಿಜ್ಞಾನ ಇಷ್ಟೆಲ್ಲ ಮುಂದುವರೆದರೂ ಸಹ ಮಲೇರಿಯಾ ರೋಗದ ಹತೋಟಿ ಸಾಧ್ಯವಾಗಿಲ್ಲ. ಅಂಕಿ ಅಂಶಗಳ ಪ್ರಕಾರ 1995ರಲ್ಲಿ ಸುಮಾರು 2 ಲಕ್ಷದ 85 ಸಾವಿರ ಮಲೇರಿಯಾ ರೋಗಿಗಳನ್ನು ಕರ್ನಾಟಕ ರಾಜ್ಯದಲ್ಲಿ ಗುರುತಿಸಲಾಗಿದೆ. ಮನುಷ್ಯನಿಂದ ಮನುಷ್ಯನಿಗೆ ಹೆಣ್ಣು ಅನಾಫಿಲೀನ್ ಸೊಳ್ಳೆ ಮಲೇರಿಯಾ ರೋಗವನ್ನು ಹರಡುತ್ತದೆ. ಎಲ್ಲ ಸೊಳ್ಳೆಗಳು ಮಲೇರಿಯಾ ರೋಗವನ್ನು ಹರಡುವುದಿಲ್ಲ. ಕೆಲವು ಗುಂಪಿಗೆ ಸೇರಿದ ಹೆಣ್ಣು ಅನಾಫಿಲಿನ್ ಸೊಳ್ಳೆಗಳು ಮಾತ್ರ. ಉದಾಹರಣೆಗೆ ಅನಾಫಿಲೀನ್ ಕುಲಿಸಿಪೇಸಿ ರೋಗವನ್ನು ಹರಡುತ್ತವೆ. ಅನಾಫಿಲೀನ್ ಫ್ಲುವಿಯೇಟಿಲಿಸ್, ಅನಾಫಿಲೀನ್ ಸ್ಟಿಫೆನ್ಸಿ ಮುಂತಾದ ಗುಂಪಿಗೆ ಸೇರಿದ ಅನಾಫಿಲೀನ್ ಸೊಳ್ಳೆಗಳು ಮಲೇರಿಯಾ ರೋಗವನ್ನು ಹರಡುತ್ತದೆ. ಗಂಡು ಸೊಳ್ಳೆಗಳು ಸಸ್ಯಾಹಾರಿಗಳಾಗಿದ್ದು ಮನುಷ್ಯನನ್ನು ಕಚ್ಚಿ ರಕ್ತ ಹೀರಲು ಸಾಧ್ಯವಿಲ್ಲ. ಎಲೆ, ಕಾಯಿ, ಹಣ್ಣುಗಳ ರಸವನ್ನು ಹೀರಿ ಬದುಕುತ್ತವೆ. ಕ್ಯೂಲೆಕ್ಸ್ ಹೆಣ್ಣು ಸೊಳ್ಳೆಯು ಆನೆಕಾಲು ರೋಗ, ಮೆದುಳು ಜ್ವರ ರೋಗವನ್ನು; ಈಡಿಸ್ ಹೆಣ್ಣು ಸೊಳ್ಳೆಗಳು ಹಂದಿಜ್ವರ, ಡೆಂಗು ಜ್ವರ ಮುಂತಾದ ರೋಗಗಳನ್ನು ಹರಡುತ್ತವೆ.

ನಮ್ಮ ದೇಶದಲ್ಲಿ ಮಲೇರಿಯಾ ರೋಗವನ್ನು ಹತೋಟಿಯಲ್ಲಿಡಲು ಪ್ರತಿವರ್ಷ 23 ಸಾವಿರ ಮೆಟ್ರಿಕ್ ಟನ್‌ಗಳಷ್ಟು ಡಿ.ಡಿ.ಟಿ., 40 ಸಾವಿರ ಮೆಟ್ರಿಕ್ ಟನ್‌ಗಳಷ್ಟು ಹೆಚ್. ಸಿ. ಹೆಚ್. ಮತ್ತು 22 ಸಾವಿರ ಮೆಟ್ರಿಕ್ ಟನ್‌ಗಳಷ್ಟು ಮೆಲಾಥಿಯಾನ ಕ್ರಿಮಿನಾಶಕಗಳನ್ನು ಸಿಂಪಡನೆ ಮಾಡಲಾಗುತ್ತಿದೆ. ಇಷ್ಟೊಂದು ಅಧಿಕ ಪ್ರಮಾಣದಲ್ಲಿ ಕ್ರಿಮಿನಾಶಕ ಸಿಂಪಡನೆಯಿಂದ, ಪರಿಸರದಲ್ಲಿ ವಾಯುಮಾಲಿನ್ಯ, ಜಲಮಾಲಿನ್ಯ, ಮತ್ತು ಆಹಾರ ಪದಾರ್ಥಗಳು ಮಲಿನಗೊಂಡು, ಜೀವ ಪರಿಸರದ ಮೇಲೆ ಪರಿಣಾಮ ಉಂಟಾಗುತ್ತಿದೆ. ಇದರ ಜತೆಗೆ ಸೊಳ್ಳೆಗಳು ಕ್ರಿಮಿನಾಶಕಗಳಿಗೆ ಪ್ರತಿರೋಧ ಪಡೆದು ಒಗ್ಗಿಕೊಂಡು, ಬದುಕಿ ಉಳಿದು, ಮಲೇರಿಯಾ ಪಿಡುಗು ಉಂಟಾಗುತ್ತದೆ. ಇವೆಲ್ಲಾ ಕಾರಣಗಳಿಂದ ಕ್ರಿಮಿನಾಶಕ ಸಿಂಪಡನೆ ಹಾಗೂ ಮಲೇರಿಯಾ ನಿಯಂತ್ರಣ ಕಾರ್ಯಕ್ರಮಗಳಿಗೆ ಜನರ ಸಹಕಾರ ದೊರೆಯುತ್ತಿಲ್ಲ.

ತಿಳಿಯಾದ ನೀರಿನಲ್ಲಿ ಅನಾಫಿಲೀಸ್ ಸೊಳ್ಳೆಗಳು ಮೊಟ್ಟೆ ಇಟ್ಟು ವಂಶಾಭಿವೃದ್ಧಿ ಮಾಡುತ್ತವೆ. ಮಳೆ ಬಂದು ನಿಂತ ನೀರು ಬಾವಿ, ಕೊಳ, ಹೊಳೆ, ಕೆರೆ, ಬತ್ತದ ಗದ್ದೆಗಳಲ್ಲಿ ನಿಂತ



ಮಲೇರಿಯಾ ಜ್ವರದಿಂದ ನರಳುತ್ತಿರುವ ಮಗು

ಮಲೇರಿಯಾ ರೋಗವನ್ನು ಹರಡುವ ಅನಾಫಿಲೀನ್ ಸೊಳ್ಳೆ

ನೀರು, ಹಳ್ಳಿಯ ಮನೆಗಳಲ್ಲಿ ಸ್ನಾನದ ಮನೆ, ಅಡಿಗೆ ಮನೆಯಿಂದ ಹೊರ ಬಂದು ನಿಂತ ನೀರು, ಪಟ್ಟಣಗಳಲ್ಲಿ ಮನೆ ಮೇಲಿನ ನೀರಿನ ತೊಟ್ಟಿ, ಉಪಯೋಗಿಸದೆ ಇರುವ ಫೌಂಟನ್‌ಗಳು, ಬಿಸಾಡಿರುವ ಟೈರುಗಳು, ಡ್ರಮ್, ಡಬ್ಬ ಇವುಗಳಲ್ಲಿ ಸೊಳ್ಳೆಗಳು ಮೊಟ್ಟೆ ಇಡುತ್ತವೆ. ಅನಾಫಿಲೀನ್ ಸೊಳ್ಳೆಗಳು ಶುದ್ಧವಾದ ನೀರಿನಲ್ಲಿ ಹಾಗೂ ನೀರು ಕಲ್ಮಷಗೊಂಡ ನಂತರ ಕ್ಯೂಲೆಕ್ಸ್ ಸೊಳ್ಳೆಗಳು ಮೊಟ್ಟೆ ಇಟ್ಟು ಸೊಳ್ಳೆಯ ಜೀವನ ಚರಿತ್ರೆ ಆರಂಭವಾಗುತ್ತದೆ. ಮೊಟ್ಟೆಗಳು 2 ದಿನಗಳ ನಂತರ ಒಡೆದು ಮರಿ ಅಥವಾ ಲಾವಾ ಹೊರಬರುತ್ತದೆ. ಸೊಳ್ಳೆಯ ಮರಿಗಳು 8 ರಿಂದ 10 ದಿನಗಳ ಕಾಲ ಒಂದೇ ಸಮನೆ ಆಹಾರ ಸೇವಿಸುತ್ತ ಸಕ್ರಿಯವಾಗಿ ಬೆಳೆದು ನಂತರ, ಪ್ಯೂಪ ಅಥವಾ ಕೋಶಾವಸ್ಥೆ ರೂಪ ತಾಳುತ್ತವೆ. ಪ್ಯೂಪ ಎರಡು ದಿನಳ ನಂತರ ತೆಳುವಾದ ಜಾಗದಲ್ಲಿ ಒಡೆದು ಪುಟ್ಟ ಸೊಳ್ಳೆ ಹೊರಬರುತ್ತದೆ. ರೆಕ್ಕೆಗಳು ಸ್ವಲ್ಪ ಒಣಗಿದ ನಂತರ ಆಹಾರವನ್ನರಸಿ ಹಾರಿ ಹೋಗುತ್ತದೆ. ಅನಾಫಿಲೀನ್ ಸೊಳ್ಳೆಯ ಮರಿಗಳು ಯಾವಾಗಲೂ ನೀರಿನ ಮೇಲ್ಭಾಗದಲ್ಲಿ ಈಜಾಡುತ್ತ ಆಹಾರ ಸೇವಿಸುತ್ತ ಬೆಳೆದರೆ ಕ್ಯೂಲೆಕ್ಸ್ ಸೊಳ್ಳೆಯ ಮರಿಗಳು ನೀರಿನ ತಳದಲ್ಲಿದ್ದು ವಾಯು ಸೇವನೆಗೆ ಪಲ್ಟಿ ಹೊಡೆಯುತ್ತ ನೀರಿನ ಮೇಲ್ಭಾಗಕ್ಕೆ ಬಂದು, ವಾಯುಸೇವನೆ ನಂತರ ತಳ ಸೇರುತ್ತವೆ.

ತಿಳಿಯಾದ ನಿಂತ ನೀರು, ನಿಧಾನವಾಗಿ ಹರಿಯುವ ನೀರು, ತೀರದ ನೀರಿನಲ್ಲಿ ಬೆಳೆದಿರುವ ಸಸ್ಯಗಳು, ಜೊಂಡು, ಬತ್ತದ ಪೈರು ಇಂತಹ ಸ್ಥಳಗಳಲ್ಲಿ ಅಸಂಖ್ಯಾತವಾಗಿ ಸೊಳ್ಳೆಯ ಮರಿಗಳನ್ನು ಕಾಣಬಹುದು. ಸಸ್ಯಗಳು ಸೊಳ್ಳೆಯ ಮರಿಗಳನ್ನು ಶತ್ರುಗಳಿಂದ ಸ್ವಲ್ಪಮಟ್ಟಿಗೆ ರಕ್ಷಿಸುತ್ತವೆ.

ಮಲೇರಿಯಾ ರೋಗವನ್ನು ನಿಯಂತ್ರಿಸಬೇಕಾದರೆ, ಅನಾಪಿಲೀನ್ ಸೊಳ್ಳೆಯ ನಿಯಂತ್ರಣವಾಗಬೇಕು. ಸೊಳ್ಳೆ ನಿಯಂತ್ರಿಸಲು ಅನೇಕ ವಿಧಾನಗಳು ರೂಢಿಯಲ್ಲಿವೆ. ಡಿ.ಇ.ಟಿ. ಹೆಚ್. ಸಿ. ಹೆಚ್. ಮುಂತಾದ ಕ್ರಿಮಿನಾಶಕಗಳನ್ನು ಬಳಸುವುದು ಶಾಶ್ವತ ಪರಿಹಾರವಲ್ಲ.

*ಮಲೇರಿಯಾ ರೋಗವನ್ನು ನಿಯಂತ್ರಿಸಲು ನಮ್ಮ ದೇಶದಲ್ಲಿ ಪ್ರತಿವರ್ಷ 23 ಸಾವಿರ ಮೆಟ್ರಿಕ್ ಟನ್‌ಗಳಷ್ಟು ಡಿ.ಡಿ.ಟಿ. 40 ಸಾವಿರ ಮೆಟ್ರಿಕ್ ಟನ್‌ಗಳಷ್ಟು ಹೆಚ್.ಸಿ.ಹೆಚ್ ಮತ್ತು 22 ಸಾವಿರ ಮೆಟ್ರಿಕ್ ಟನ್‌ಗಳಷ್ಟು ಮೆಟಾಸಿಯಾನ್ ಕ್ರಿಮಿನಾಶಕಗಳನ್ನು ಸಿಂಪಡನೆ ಮಾಡಲಾಗುತ್ತಿದೆ. ಇದರಿಂದ ತಾತ್ಕಾಲಿಕವಾಗಿ ಸೊಳ್ಳೆಗಳ ನಿಯಂತ್ರಣವಾದರೂ, ಕ್ರಿಮಿನಾಶಕಗಳ ಬಳಕೆಯಿಂದ ವಾಯುಮಾಲಿನ್ಯ, ಜಲಮಾಲಿನ್ಯ ಹಾಗೂ ಆಹಾರ ಪದಾರ್ಥಗಳು ಮಲಿನಗೊಂಡು ಜೀವ ಜಗತ್ತಿನ ಮೇಲೆ ದುಷ್ಪರಿಣಾಮಗಳು ಉಂಟಾಗುತ್ತವೆ.*

ಪ್ರಕೃತಿದತ್ತ ಪರಿಸರ ನೈರ್ಮಲ್ಯತೆಯಿಂದ ಸೊಳ್ಳೆ ವಂಶಾಭಿವೃದ್ಧಿಯಾಗದಂತೆ, ಸೂಕ್ತ ವ್ಯವಸ್ಥೆ ಮಾಡಬೇಕು. ಸೊಳ್ಳೆಯ ನಿಯಂತ್ರಣದಿಂದ ಮಲೇರಿಯಾ ರೋಗ ನಿಯಂತ್ರಣ. ಇದು ಕೇವಲ ಆರೋಗ್ಯ ಇಲಾಖೆಯ ಜವಾಬ್ದಾರಿ ಎಂದು ತಿಳಿಯಬಾರದು. ವಿವಿಧ ಇಲಾಖೆಗಳು ಸಕ್ರಿಯವಾಗಿ ಭಾಗವಹಿಸಬೇಕು. ಉದಾಹರಣೆಗೆ ಲೋಕೋಪ ಯೋಗಿ ಇಲಾಖೆ, ಬೆಂಗಳೂರು ನೀರು ಪೂರೈಕೆ ಹಾಗೂ ಒಳಚರಂಡಿ ಇಲಾಖೆ, ಮೀನುಗಾರಿಕೆ ಕೃಷಿ ಇಲಾಖೆ, ವ್ಯವಸಾಯ ಇಲಾಖೆ, ಗ್ರಾಮ ಪಂಚಾಯಿತಿ ಹೀಗೆ ಎಲ್ಲ ಇಲಾಖೆಗಳ ಸಂಘಟನೆಯಿಂದ ಮಾತ್ರ ಸೊಳ್ಳೆಯ ನಿಯಂತ್ರಣ ಸಾಧ್ಯವಾಗುತ್ತದೆ.

ಬೆಂಗಳೂರು ನಗರದ ಅನೇಕ ಪ್ರದೇಶಗಳಲ್ಲಿ ನೀರಿನ ಪೈಪು ಒಡೆದು ಅನೇಕ ಸ್ಥಳಗಳಲ್ಲಿ ನಿಂತ ನೀರಿನಲ್ಲಿ ಅನಾಫಿಲೀನ್ ಸೊಳ್ಳೆವೃದ್ಧಿಯಾಗಲು ಅವಕಾಶವಾಗುತ್ತದೆ. ಜನರು ಈ ಬಗ್ಗೆ ಸೂಕ್ತ ಅಧಿಕಾರಿಗಳ ಗಮನಕ್ಕೆ ತಂದು, ನೀರಿನ ಪೈಪು ರಿಪೇರಿಯಾಗುವಂತೆ ನೋಡಿಕೊಳ್ಳಬೇಕು. ರಸ್ತೆಯ ಹಳ್ಳ - ಕೊಳ್ಳಗಳನ್ನು ಮುಚ್ಚಬೇಕು. ಮನೆ ಅಥವಾ ಕಟ್ಟಡಗಳ ಮೇಲಿನ ನೀರು ಶೇಖರಿಸುವ ತೊಟ್ಟಿಗಳನ್ನು ಆಗಾಗ ಖಾಲಿ ಮಾಡಿ ನಂತರ ಶುಚಿ ಮಾಡಿ ಶೇಖರಿಸುತ್ತಿರಬೇಕು.

**ಮನೆಯ ಸುತ್ತಮುತ್ತ ಇರುವ ನೀರು ತುಂಬಿದ ಗುಂಡಿ, ಚರಂಡಿ, ಹಾಳುಬಾವಿ, ತಿಪ್ಪೆಗುಂಡಿ, ಒಂದೇ ಕಡೆ ನಿಂತ ಮಲಿನಗೊಂಡ ನೀರು, ಅನುಪಯುಕ್ತ ವಸ್ತುಗಳ ರಾಶಿ, ಮೊದಲಾದವು ಸೊಳ್ಳೆಗಳ ವಂಶಾಭಿವೃದ್ಧಿಗೆ ಪ್ರಮುಖ ಸ್ಥಳಗಳು, ಪರಿಸರ ನೈರ್ಮಲ್ಯವನ್ನು ಕಾಪಾಡಿಕೊಂಡರೆ ಸೊಳ್ಳೆಗಳ ನಿಯಂತ್ರಣ ಮಾಡಲು ಸರ್ಕಾರದ ಜೊತೆಗೆ ಸ್ಥಳೀಯ ಸಂಘ-ಸಂಸ್ಥೆಗಳು ಸಾರ್ವಜನಿಕರು ಸಹಕರಿಸಿದಾಗ ಮಾತ್ರ ಮಲೇರಿಯಾ ರೋಗವನ್ನು ತಡೆಗಟ್ಟಲು ಸಾಧ್ಯವಾಗುತ್ತದೆ.**

ನೀರು ಹರಿಯುತ್ತಿದ್ದರೆ ಸೊಳ್ಳೆಗಳು ವಂಶಾಭಿವೃದ್ಧಿ ಮಾಡಲು ಕಷ್ಟವಾಗುತ್ತದೆ. ಇದೇ ಕ್ರಮವನ್ನು ಭತ್ತದ ಗದ್ದೆ. ನೀರಾವರಿ ಕಾಲುವೆಗಳಲ್ಲಿ ಅನುಸರಿಸಬಹುದು. ಸೊಳ್ಳೆಯ ಜೀವನ ಚರಿತ್ರೆ ಸಂಪೂರ್ಣವಾಗಬೇಕಾದರೆ 10 ರಿಂದ 12 ದಿನಗಳು ಬೇಕಾಗುತ್ತದೆ. ಈ ಅವಧಿಯೊಳಗಾಗಿ, ಅಂದರೆ, ವಾರಕ್ಕೊಮ್ಮೆ ನೀರು ಹಾಯಿಸಿ, ನೀರು ವೇಗವಾಗಿ ಹರಿಯುವಂತೆ ನೋಡಿಕೊಂಡರೆ, ಮೊಟ್ಟೆ ಲಾರ್ವ, ಕೋಶಾವಸ್ಥೆಯಾಗಿ ಬೆಳವಣಿಗೆಯಾಗದಂತೆ ತಡೆಯುಂಟಾಗುತ್ತದೆ. ಸಣ್ಣ ಪುಟ್ಟ ತೊರೆ, ಕಾಲುವೆಗಳಲ್ಲಿ ನೀರು ನಿಲ್ಲದೆ ಹರಿದು ಹೋಗುತ್ತಿರುವಂತೆ ನೀರಾವರಿ ಇಲಾಖೆಯ ಸಹಯೋಗದೊಂದಿಗೆ ಇಳಿಜಾರು ಏರ್ಪಡಿಸಬೇಕು. ಸೊಳ್ಳೆಗಳ ಅನೇಕ ಶತ್ರುಗಳನ್ನು ಉಪಯೋಗಿಸಬಹುದು. ಹಲವು ಜಾತಿಯ ಬ್ಯಾಕ್ಟೀರಿಯ, ಸಿಲಮೋ ಮೈಸಿನ್ ಬೂಷ್ಟು ಮರ್‌ಮಿಟಿಡ್ ಹುಳುಗಳು, ನೆಕ್ಟೊನೆಕ್ಟಿಡ್ ತಿಗಣೆ, ಡ್ರೇಗನ್‌ನೊಣ ಮುಂತಾದ ಅನೇಕ ರೀತಿಯ ಸೊಳ್ಳೆಯ ಶತ್ರುಗಳನ್ನು ಆರೋಗ್ಯ, ವ್ಯವಸಾಯ ಇಲಾಖೆಗಳ ಸಲಹೆಯಂತೆ ಉಪಯೋಗಿಸಿ ಸೊಳ್ಳೆಗಳನ್ನು ನಿಯಂತ್ರಿಸಬಹುದು. ಹೊಂಡ, ಹೊಳೆಯ ನೀರಿನಲ್ಲಿ



ಸೊಳ್ಳೆಗಳ ತಾಣ - ಬತ್ತದ ಗದ್ದೆ

ಗ್ಯಾಂಬೂಸಿಯ



ಹೆಣ್ಣು

ಗಂಡು

*ಕುತೂಹಲ ಸಂಗತಿಯೆಂದರೆ ಗಂಡು ಸೊಳ್ಳೆಗಳು ಸಸ್ಯಹಾರಿಗಳಾಗಿದ್ದು, ಅವುಗಳ ಮನುಷ್ಯನ ರಕ್ತವನ್ನು ಹೀರುವುದಿಲ್ಲ. ರೋಗ ಹರಡುವುದು ಹೆಣ್ಣು ಸೊಳ್ಳೆಗಳಿಂದ. ಅನಾಫಿಲೀನ್ ಹೆಣ್ಣು ಸೊಳ್ಳೆ ಮಲೇರಿಯಾ ರೋಗಕ್ಕೆ ಕಾರಣವಾದರೆ ಕ್ಯೂರೆಕ್ಸ್ ಹೆಣ್ಣು ಸೊಳ್ಳೆಯಿಂದ ಆನೆಕಾಲು ಹಾಗೂ ಮೆದುಳು ಜ್ವರ, ಈಡಿಕ್ಸ್ ಹೆಣ್ಣು ಸೊಳ್ಳೆಯಿಂದ ಡೆಂಗು ಜ್ವರ ಹರಡುತ್ತದೆ.*

ಜೊಂಡು ಹಾಗೂ ಇತರ ಕಳೆ ತೆಗೆದು ಆಗಾಗ ಶುಚಿ ಮಾಡುತ್ತಿರಬೇಕು. ಏಕೆಂದರೆ ಸೊಳ್ಳೆ ಮರಿಗಳು ಸಸ್ಯಗಳಿಂದ ರಕ್ಷಣೆ ಪಡೆಯುತ್ತವೆ. ಉಪಯೋಗಿಸದೆ ಇರುವ ನೀರಿಗೆ ಫ್ಯಾರಿಸ್‌ಗ್ರೀನ್ ಪುಡಿಯನ್ನು ಸಿಂಪಡಿಸಬಹುದು. ಪ್ಯಾರೀಸ್ ಗ್ರೀನ್ ಪುಡಿಯು ಪಾಚಿಯನ್ನು ಹೋಲುತ್ತಿದ್ದು ಇದರಲ್ಲಿ ಆರೆಸೆನಿಕ್ ವಿಷ ಇರುತ್ತದೆ. ಈ ಪುಡಿಯನ್ನು ಸೊಳ್ಳೆಯ ಮರಿಗಳು ತಿಂದು ಸಾಯುತ್ತವೆ. ನಿಂತ ನೀರಿಗೆ ಮಲೇರಿಯಾಲ್, ಡೀಸಲ್ ಇತ್ಯಾದಿಗಳನ್ನು ಸುರಿದರೆ ಸೊಳ್ಳೆ ಮರಿಗಳು ಉಸಿರಾಡಲು ಸಾಧ್ಯವಾಗದೆ ಸಾಯುತ್ತವೆ. ಉಪಯೋಗಿಸದೆ ಇರುವ ಭಾವಿಗಳನ್ನು ಮುಚ್ಚಿಬಿಡುವುದು ಒಳ್ಳೆಯದು. ಅಥವಾ ವಿಕಾಸಿತ ಪಾಲಿಸ್ಟಿರೀನ್ ಮಣಿಗಳು ಲಭ್ಯವಿದ್ದು ಇವುಗಳನ್ನು ಹಾಕಿದರೆ ಇವು ನೀರಿನ ಮೇಲೆ ಅನೇಕ ವರ್ಷಗಳು ತೇಲುತ್ತ ಇದ್ದು. ಸೊಳ್ಳೆಗಳು ಮೊಟ್ಟೆ ಇಡಲು ಸಾಧ್ಯವಾಗದಂತೆ ಅಡಚಣೆ ಉಂಟಾಗುತ್ತದೆ. ಅಡಿಗೆ ಮನೆ, ಸ್ನಾನದ ಮನೆಯಿಂದ ಹೊರ ಬರುವ ನೀರು ಒಂದೇ ಕಡೆ ನಿಲ್ಲದಂತೆ ನೋಡಿಕೊಳ್ಳಬೇಕು. ಆರೋಗ್ಯ ಕಾರ್ಯಕರ್ತರ ಸಲಹೆಯಂತೆ ಹಳ್ಳಿಗಳಲ್ಲಿ ಇಂಗು ಬಚ್ಚಲು ನಿರ್ಮಾಣ ಮಾಡಬೇಕು. ಹಳ್ಳಿ ಹಾಗೂ ನಗರಗಳ ಜೌಗು ಪ್ರದೇಶಗಳಲ್ಲಿ ಗಿಡ ಮರಗಳನ್ನು ನೆಡಬೇಕು. ಸಸ್ಯರಾಶಿಯಿಂದ ವಾಯುಮಾಲಿನ್ಯ ಕಡಿಮೆಯಾಗುತ್ತದೆ. ನೀರಿನ ಅಂಶವನ್ನು ಗಿಡಗಳು ಉಪಯೋಗಿಸಿಕೊಳ್ಳುತ್ತವೆ. ಕೆರೆ, ಹೊಳೆ ಮುಂತಾದ ಸ್ಥಳಗಳಲ್ಲಿ, ಸೊಳ್ಳೆಯ ಲಾರ್ವ ಭಕ್ಷಕ ಮೀನುಗಳನ್ನು ಉಪಯೋಗಿಸುವುದು ರೂಢಿಯಲ್ಲಿದೆ. ಈ ಕಾರ್ಯವನ್ನು ಗ್ರಾಮ ಪಂಚಾಯಿತಿ, ಮೀನುಗಾರಿಕೆ, ಆರೋಗ್ಯ ಇಲಾಖೆಗಳ ಸಹಯೋಗದೊಂದಿಗೆ ಕೈಗೊಳ್ಳಬೇಕು. ಈ ಮೀನುಗಳ ಬಗ್ಗೆ ಕೆಲವು ವಿಷಯ ತಿಳಿಯೋಣ.

ಗ್ಯಾಂಬೂಸಿಯ ಅಫಿನಿಸ್, ಗಪ್ಪಿ ಮೀನು, ಪಂಚಾಕ್ಸ್ ಮುಂತಾದ ಮೀನುಗಳು ಚಿಕ್ಕಪುಟ್ಟ ಮೀನುಗಳಾಗಿದ್ದು ಇವುಗಳನ್ನು ಮನುಷ್ಯರು ಆಹಾರವಾಗಿ ಉಪಯೋಗಿಸುವುದಿಲ್ಲ. ಈ ಮೀನುಗಳು ವರ್ಷದಲ್ಲಿ 3-4 ಬಾರಿ, ಒಂದು ಸಲಕ್ಕೆ 80 ರಿಂದ 100 ಮರಿಗಳನ್ನು ಹಾಕುತ್ತವೆ ಈ ಜಾತಿಯ ಮೀನುಗಳು ಅಧಿಕ ಸಂಖ್ಯೆಯಲ್ಲಿ ಸೊಳ್ಳೆಯ ಮರಿಗಳನ್ನು ತಿಂದು ಹಾಕುತ್ತವೆ. ಕಡಿಮೆ ಹಾಗೂ ಹೆಚ್ಚು ಆಳದ ನೀರಿನಲ್ಲಿ ಮತ್ತು ವಿವಿಧ ವಾತಾವರಣಕ್ಕೆ ಸುಲಭವಾಗಿ ಹೊಂದಿಕೊಳ್ಳುವ ಈ ಜಾತಿಯ ಮೀನುಗಳನ್ನು ಬಾವಿ, ಕೆರೆ, ಹೊಳೆ, ಹೊಂಡ ಮುಂತಾದ ನೀರಿನ ಪ್ರದೇಶಗಳಿಗೆ ಬಿಡಬಹುದು. ಈ ಮೀನುಗಳ ಆಯಸ್ಸು ಸುಮಾರು 3-4 ವರ್ಷಗಳಿದ್ದು ಅನೇಕ ಪ್ರದೇಶಗಳಲ್ಲಿ ಇದರಿಂದ ಸೊಳ್ಳೆಯ ನಿಯಂತ್ರಣ ಸಾಧ್ಯವಾಗಿದೆ. ಹಳ್ಳಿಗಳಲ್ಲಿ. ಸೊಳ್ಳೆ ಕಡಿತದಿಂದ ದೂರವಿರಲು ಪ್ರಕೃತಿದತ್ತ ವಿಧಾನಗಳನ್ನು ಅನುಸರಿಸುತ್ತಾರೆ. ಬೇವಿನ ಸೊಪ್ಪನ್ನು ಬೆಂಕಿಗೆ ಹಾಕಿ ಹೊಗೆ ಉಂಟು ಮಾಡಿ ಸೊಳ್ಳೆಗಳನ್ನು ಓಡಿಸಬಹುದು.

ಸೊಳ್ಳೆ ಪರದೆ ಹಾಗೂ ಸೊಳ್ಳೆಯನ್ನು ದೂರವಿಡುವ ಕ್ರೀಮ್‌ಗಳು ಲಭ್ಯವಿದ್ದು, ಹಲವರು ಉಪಯೋಗಿಸುತ್ತಾರೆ.

ಬೇವಿನ ಎಣ್ಣೆಯನ್ನು ಕೊಬ್ಬರಿ ಎಣ್ಣೆಯೊಂದಿಗೆ ಸೇರಿಸಿ, ಮೈಗೆ ಹಚ್ಚಿಕೊಂಡರೆ ಸೊಳ್ಳೆ ಕಡಿತದಿಂದ ದೂರವಿರಬಹುದು.

ಮಲೇರಿಯಾ ರೋಗದ ಬಗ್ಗೆ ಜನರಲ್ಲಿ ಅರಿವು ಅಗತ್ಯ. ಯಾವುದೇ ಜ್ವರ ಮಲೇರಿಯಾ ಇರಬಹುದು. ಆರೋಗ್ಯ ಕಾರ್ಯಕರ್ತರು ಮನೆಗೆ ಬಂದು ರಕ್ತ ಲೇಪನ ತೆಗೆದು ಕ್ಲೋರೋಕ್ವಿನ್ ಮಾತ್ರೆ ನೀಡಿತ್ತಾರೆ. ಮಲೇರಿಯಾ ನಿಯಂತ್ರಣ ಕಾರ್ಯಕ್ರಮಕ್ಕೆ ಎಲ್ಲರ ಸಹಕಾರ ಅತ್ಯಗತ್ಯ.

ಪರಿಸರ ನೈರ್ಮಲ್ಯ, ಪ್ರಕೃತಿದತ್ತ, ಜೀವಿಕ ವಿಧಾನಗಳಿಂದ ಕಡಿಮೆ ಖರ್ಚಿನಲ್ಲಿ ಸೊಳ್ಳೆಯ ನಿಯಂತ್ರಣ ಇವು ಜನಪ್ರಿಯ ವಿಧಾನಗಳು. ಹಾಗೂ ಶಾಶ್ವತ ವಿಧಾನಗಳು ಎಲ್ಲರ ಸಹಕಾರ, ಸಂಘಟನೆ, ಸಕ್ರಿಯ ಪಾತ್ರದಿಂದ ಮಾತ್ರ ಇದು ಸಾಧ್ಯ. ●





# ಶ್ರೇಷ್ಠ ಋಷಿವರ್ಯ

– ಎನ್. ಎಮ್. ಕೆ. ಸೋಗಿ
ಮಾಜಿ ವಿದ್ಯಾ ಉಪಮಂತ್ರಿ
ಶಿವಚೇತನ, 664, 10ನೇ ಕ್ರಾಸ್,
2ನೇ ಹಂತ, ಬಸವೇಶ್ವರ ನಗರ, ಬೆಂಗಳೂರು-86

ವಿಶ್ವಚೇತನ ಶಕ್ತಿ ಪರಶಿವನ ತೇಜಸ್ಸು
ಗುರುರೂಪವನು ತಾಳಿ ಧರೆಗಿಳಿದು ಬಂದಂತೆ
ಬಸವಾದಿ ಶಿವಶರಣ ತತ್ತ್ವ ನೀತಿಗಳೆಲ್ಲ
ಒಟ್ಟಾಗಿ ಗಟ್ಟಿನೆಲೆಗಟ್ಟನ್ನು ಪಡೆದಂತೆ
ಉದ್ದಾಮ ಸಾಹಸದ ಪ್ರತಿರೂಪವೆಂಬಂತೆ
ಮಾನವೀಯ ಉದಾತ್ತ ಮೌಲ್ಯಗಳ ಸತ್ತ್ವವೇ
ಸಾಕಾರಗೊಂಡು ಗುರುರೂಪವನು ತಳೆದಂತೆ,
ಸಿದ್ಧಗಂಗಾ ಮಠದ ಪರಮಪೂಜ್ಯ ಮಹರ್ಷಿ
ಸತ್ಯ, ಧರ್ಮಗಳ ಸಾಕ್ಷಾತ್ಕಾರವೆನಿಸಿರುವ
ಶ್ರೀ ಶ್ರೀ ಶಿವಕುಮಾರಸ್ವಾಮಿ ಯತಿಪುಂಗವರು
ಸರ್ವಜನರ ಹಿತೈಷಿ, ಸರ್ವಜನರನುರಾಗಿ
ಅಪರೂಪ, ಅಪ್ರತಿಮವೆನಿಸಿರುವ ಶಿವಯೋಗಿ.

ಸಕಲ ಜೀವಾತ್ಮರಿಗೆ ಲೇಸಬಯಸುವ ಕುಲಜ,
ಭವರೋಗಿಗಳಿಗೆ ಪರಿಹಾರ ನೀಡುವ ಭಿಷಜ,
ಜ್ಞಾನದಾನವನೀಡಿ, ಜನರನುದ್ಧರಿಸಲಿಕೆ
ಭುವಿಗಿಳಿದು ಬಂದಿರುವ ಮನುಜರೂಪದ ದಿವಿಜ
ಇವರ ಧೀಮಂತ, ದಿವ್ಯತೆಯ ನೇತೃತ್ವದಲಿ
ಸಿದ್ಧಗಂಗಾ ಮಠದ ಪರಮ ಪುಣ್ಯಕ್ಷೇತ್ರ
ಅದ್ಭುತ ಪವಾಡ ಸದೃಶ ಪ್ರಗತಿ ಸಾಧಿಸಿದೆ;
ಸರ್ವಸುಂದರವಾಗಿ, ಸರ್ವಬಂಧುರವಾಗಿ,
ದಿವ್ಯತೆಯ, ಭವ್ಯತೆಯ ನೆಲೆಯಾಗಿ ಮೆರೆಯುತಿದೆ.
ಲೋಕಕ್ಕೆ ಆದರ್ಶವಾಗಿ ಕಂಗೊಳಿಸುತ್ತಿದೆ.

ಐದಾರು ಸಾವಿರದ ವಿದ್ಯಾರ್ಥಿ ವೃಂದಕ್ಕೆ
ನಿತ್ಯವೂ ಬರುತಿಹ ಸಹಸ್ರಾರು ಭಕ್ತರಿಗೆ
ಉಚಿತ ಊಟದ, ವಸತಿ ಸೌಕರ್ಯ ನೀಡುತಿಹ
ಅನ್ನ, ಜ್ಞಾನದ ನಿತ್ಯ ದಾಸೋಹ ನಡೆದಿಹುದು.
ವಿದ್ಯಾರ್ಥಿಗಳ ಊಟ, ವಸತಿ ಸೌಕರ್ಯಕ್ಕೆ
ಭವ್ಯ ಸೌಧಗಳಂಥ ನಿಲಯಗಳ ನಿರ್ಮಾಣ
ಕ್ಷೇತ್ರಕ್ಕೆ ಶೋಭೆಯನು ಘನತೆಯನು ನೀಡಿಹುದು.

ದೇವ ಋಷಿ ಆಶ್ರಮದ ಗುರುಕುಲದ ತದ್ರೂಪ
ಜ್ಞಾನ, ಅನ್ನದ ದಾನ ದೈವತದ ಸದ್ರೂಪ
ಸದ್ಭಕ್ತಿ ಪ್ರೇರಣೆಯ ಶಿವಕಳೆಯ ಚಿದ್ರೂಪ
ಶಿಕ್ಷಣದ ಬಹುಮುಖದ ಅಕ್ಷಯದ ನಿಕ್ಷೇಪ
ನಿರುತವೂ ಬೆಳಗುತಿದೆ ಜ್ಞಾನ, ಧರ್ಮದ ದೀಪ.

ಸರ್ವವನು ಸಾಧಿಸುವ ಸಾಮರ್ಥ ಹೊಂದಿರುವ
ಶ್ರೀ ಸ್ವಾಮಿಗಳ ಮಹಾನ್ ಕರ್ತೃತ್ವ ಶಕ್ತಿಗೇ
ಉತ್ತುಂಗ ಸಾಕ್ಷಿ ಶ್ರೀ ಸಿದ್ಧಗಂಗಾ ಕ್ಷೇತ್ರ.
ಸರ್ವರಿಗೂ ಪೂಜ್ಯವಾಗಿದೆ ಸದಾ ಸರ್ವತ್ರ.

ತೊಂಬತ್ತೊಂದು ವರುಷಗಳ ವೃದ್ಧಾಪ್ಯದಲ್ಲಿಯೂ,
ಚೇತನ ಚಿಲುಮೆಯಂತೆ, ಕುಗ್ಗದುತ್ಸಾಹದಲಿ
ಕಾಯಕದ ನಿಷ್ಠೆಯಿಂ ಸೇವಾ ನಿರತರಾಗಿ,
ಬೃಹತ್ ಸಂಸ್ಥೆಯ ಬೃಹತ್‌ಕಾರ್ಯಗಳ ಹೊಣೆಹೊತ್ತು
ಪರಿಶುದ್ಧ, ನೀತಿಯುತ ಆಡಳಿತ ನಡೆಸಿಹರು.
ಸದಾಕಾಲವು ಶಿವನ ಧ್ಯಾನತನ್ಮಯರಾಗಿ
ಶಿವಪೂಜೆ, ಜನಸೇವೆಯಲಿ ದೇಹಸವೆಸುತ್ತ
ನಾಡಿನಾದ್ಯಂತವೂ ಸಂಚಾರ ಮಾಡುತ್ತ
ಧರ್ಮಪ್ರಚಾರ ಕಾರ್ಯದಿ ಮಗ್ನರಾಗಿಹರು
ಅನ್ನ, ಜ್ಞಾನಗಳ ದಾಸೋಹ ಕಾರ್ಯದ ಜೊತೆಗೆ
ಧರ್ಮೋಪದೇಶ ದಾಸೋಹವನು ಕೈಕೊಂಡು
ತ್ರಿವಿಧ ದಾಸೋಹ ಮೂರ್ತಿಗಳಾಗಿ ಮೆರೆದಿಹರು.

ವಿಶ್ವಕ್ಕೆ ಆದರ್ಶ ಇವರ ಸೇವಾಕಾರ್ಯ
ವಿಶ್ವದಷ್ಟೇ ವಿಶಾಲ ಇವರ ಮನ, ಔದಾರ್ಯ
ಸರ್ವಸದ್ಗುಣದ ನಿಧಿ ಶಿವಯೋಗ ಪ್ರಾಚಾರ್ಯ
ಶಿವಕುಮಾರಸ್ವಾಮಿಗಳು ಶ್ರೇಷ್ಠ ಋಷಿವರ್ಯ.
ಬಾಳಲೀ ಋಷಿವರ್ಯಮೀರುತ್ತ ಶತವರುಷ
ಹರಸುತ್ತ ಸರ್ವರಿಗೂ ಸರ್ವಸುಖ ಸಂತೋಷ ●

## ಶ್ರೀ ಮಠದಲ್ಲಿ ವಿದ್ಯಾರ್ಥಿಗಳ ದಾಖಲಾತಿ - ಒಂದು ನೋಟ



ಶ್ರೀ ಮಠಕ್ಕೆ ಸೇರಬಯಸುವ ವಿದ್ಯಾರ್ಥಿಗಳ ಪ್ರವೇಶ ಪತ್ರಗಳ ಪರಿಶೀಲನೆಯಲ್ಲಿ ಶ್ರೀ ಶ್ರೀಗಳವರು



ಶ್ರೀ ಮಠಕ್ಕೆ ಸೇರಲು ನೂರಾರು ನಿರೀಕ್ಷಾರ್ಥಿಗಳು







ಶ್ರೀ ಮಠಕ್ಕೆ ಸೇರಲು ಕಾಯುತ್ತಿರುವವರ ದೃಶ್ಯ



ಶ್ರೀ ಮಠದಲ್ಲಿ ಪ್ರವೇಶಾವಕಾಶ ನಿರೀಕ್ಷೆಯಲ್ಲಿ ಆಕಾಂಕ್ಷಿಗಳು



ಶ್ರೀ ಮಠಕ್ಕೆ ಸೇರಲು ಕಾದು ಕುಳಿತಿರುವ ಪ್ರವೇಶಾರ್ಥಿಗಳು



ಶ್ರೀ ಮಠದಲ್ಲಿ ಅವಕಾಶ ಪಡೆಯುತ್ತೇವೆಂಬ ನಂಬಿಕೆಯೊಂದಿಗೆ ಗಂಟು ಮೂಟೆ ಸಮೇತ ಬಂದಿರುವ ವಿದ್ಯಾರ್ಥಿಗಳು



ಶ್ರೀ ಮಠದಲ್ಲಿ ವ್ಯಾಸಂಗ ಮಾಡಲು ಅವಕಾಶ ಪಡೆಯುತ್ತಿರುವ ಪೋಷಕರು - ವಿದ್ಯಾರ್ಥಿಗಳೊಂದಿಗೆ





# ಶ್ರೀ ಶ್ರೀಗಳವರು ಭಾಗವಹಿಸಿದ ವಿವಿಧ ಸಭೆ ಸಮಾರಂಭಗಳು



ಮಧುಗಿರಿ ತಾಲ್ಲೂಕು ಐ. ಡಿ. ಹಳ್ಳಿಯಲ್ಲಿ ದಿ. 14.5.98 ರಂದು ನಡೆದ ಗ್ರಾಮಾಂತರ ಬಸವ ಜಯಂತಿ ಕಾರ್ಯಕ್ರಮವನ್ನು ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಪುರಸಭಾ ಅಧ್ಯಕ್ಷೆ ಶ್ರೀಮತಿ ಗೌರಮ್ಮ ಪಂಚಾಕ್ಷರಯ್ಯ, ಜನಪದ ಸಾಹಿತಿ ಪ್ರೊ. ಹೆಚ್. ವಿ. ವೀರಭದ್ರಯ್ಯ, ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ಸಮಾರಂಭದಲ್ಲಿ ಕಿಕ್ಕಿರಿದ ಪ್ರೇಕ್ಷಕರು




ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ದಿವ್ಯಸಾನಿಧ್ಯದಲ್ಲಿ ನೆಲಮಂಗಲದ ಪವಾಡಗ ಬಸವಣ್ಣ ದೇವರ ಮಠದಲ್ಲಿ ಮೇ 24ರಂದು ನಡೆದ ಶ್ರೀ ಶ್ರೀ ಸದಾಶಿವ ಸ್ವಾಮಿಗಳವರ ರಜತ ಮಹೋತ್ಸವ ಮತ್ತು ಗ್ರಾಮಾಂತರ ಬಸವ ಜಯಂತಿ ಕಾರ್ಯಕ್ರಮ ದಲ್ಲಿ ಹರಗುರು ಚರಮೂರ್ತಿಗಳು ಮತ್ತು ಗಣ್ಯರು



ಸಮಾರಂಭಕ್ಕೆ ಮುನ್ನ ನಡೆದ ಭವ್ಯ ಮೆರವಣಿಗೆಯಲ್ಲಿ ಹರಗುರು ಚರಮೂರ್ತಿಗಳು, ಗಣ್ಯರು ಹಾಗೂ ಭಕ್ತರು











ದಿನಾಂಕ 23.5.98 ರಂದು ಇಸುವನಹಳ್ಳಿ ಭಕ್ತಾದಿಗಳಿಂದ ಪೂಜಾಕೈಂಕರ್ಯ ಸ್ವೀಕರಿಸಿದ ಸಂದರ್ಭದಲ್ಲಿ ಶ್ರೀ ಶ್ರೀಗಳವರು - ಹಳೆಯ ಮಠದ ಮುಂಭಾಗ



ಇಸುವನಹಳ್ಳಿ ಭಕ್ತ ವೃಂದದವರಿಂದ ಪೂಜಾ ಕೈಂಕರ್ಯ ಸ್ವೀಕರಿಸಿ ದಯಮಾಡಿಸುತ್ತಿರುವ ಶ್ರೀ ಶ್ರೀಗಳು



ಪೂಜ್ಯ ಕಿರಿಯ ಶ್ರೀ ಶ್ರೀಗಳವರೊಂದಿಗೆ ಇಸುವನಹಳ್ಳಿ ಭಕ್ತಾದಿಗಳು

# ಸೇವಾಸದ್ಭಾವಿ - ಶ್ರೀ ಎ. ಸಿ. ಶಾಂತಮಲ್ಲೇಗೌಡರು

*ಹಿರಿಯರಿಟ್ಟ ಹೆಸರಿಗೆ ತಕ್ಕಂತೆ ಶಾಂತ ಸ್ವಭಾವವನ್ನು ಮೈಗೂಡಿಸಿಕೊಂಡಿರುವ ಶ್ರೀ ಅರಳಗುಪ್ಪೆ ಚಂದ್ರೇಗೌಡ ಶಾಂತಮಲ್ಲೇಗೌಡರು ವಿನಯ ಸಂಪನ್ನರು, ಸರಳತೆ ಸಜ್ಜನಿಕೆಗೆ ಹೆಸರಾದವರು. ಕಾಯಕದಿಂದ ಗಳಿಸಿದ ಬಹುಪಾಲನ್ನು ಸಮಾಜದ ಒಳಿತಿಗಾಗಿ ವಿನಿಯೋಗಿಸುತ್ತಿರುವ ಶ್ರೀ ಎ. ಸಿ. ಶಾಂತಮಲ್ಲೇಗೌಡರು ಸೇವೆ ಮತ್ತು ದಾನಕ್ಕೆ ಮತ್ತೊಂದು ಹೆಸರು. ಶ್ರೀಯುತರ ಔದಾರ್ಯ, ಸೇವಾ ಮನೋಭಾವ, ಸಚ್ಚಾರಿತ್ರ್ಯವನ್ನು ಮನಗಂಡ ಶ್ರೀ ಮಠದ ಭಕ್ತಾದಿಗಳು, ಅಭಿಮಾನಿಗಳು ಹಾಗೂ ಹಳೆಯ ವಿದ್ಯಾರ್ಥಿಗಳು ಪರಮಪೂಜ್ಯ ಶ್ರೀ ಶ್ರೀಗಳವರ 91 ನೇ ಜನ್ಮ ದಿನಾಚರಣೆಯ "ಗುರುವಂದನ" ಸಮಾರಂಭದಲ್ಲಿ 'ಸೇವಾ ಸದ್ಭಾವಿ' ಎಂಬ ಬಿರುದನ್ನು ನೀಡಿ ಗೌರವಿಸಿದರು. ಅವರ ಸಂಕ್ಷಿಪ್ತ ಪರಿಚಯ ಇಲ್ಲಿದೆ.*

ಅರಳಗುಪ್ಪೆಯ ಚಂದ್ರೇಗೌಡರು ಉದಾರ ಚರಿತರು. ಸುಸಂಸ್ಕೃತ ಜೀವನಕ್ಕೆ ಹೆಸರಾದವರು. ಚಿಕ್ಕಮಗಳೂರು ಕಾಫಿಯಂತೆ ಘಮಘಮಿಸಿದರು. ಕಾಫಿ ಕೃಷಿಯಲ್ಲಿ ಸಧ್ಭಕ್ತರೆನಿಸಿದರು. ತೆಂಗಿನ ತೋಟವನ್ನು ಆರೈಸಿದ ಕೀರ್ತಿ ಸಂಪನ್ನರು. ಕಾಯಕ ಸಧ್ಭಾವದಿಂದ ಅಪಾರ ಐಶ್ವರ್ಯ ಗಳಿಸಿದರು. ಗಳಿಸಿದ್ದನ್ನು ನೆಲದ ಮರೆಯಲ್ಲಿ ಹೂಳಿಡಲಿಲ್ಲ; ಸಮಾಜರೂಪಿ ಜಂಗಮಕ್ಕೆ ಅರ್ಪಿಸಿದರು. "ಧರ್ಮಪ್ರಕಾಶಕ" ರೆಂದು ಶ್ರೀ ಮನಹ್ಮಾರಾಜ ಶ್ರೀ ಕೃಷ್ಣದೇವರಾಜ ಒಡೆಯರಿಂದ ಸನ್ಮಾನಿತರಾದರು. ಗುರು-ಲಿಂಗ-ಜಂಗಮ ಪ್ರೇಮಿಗಳಾಗಿ ದಾಸೋಹ ಸೇವಾಶೀಲರಾಗಿ, ಶಿಕ್ಷಣಾಭಿಮಾನಿಗಳಾಗಿ, ಕೊಡುಗೈ ದೊರೆಯೆನಿಸಿ ಬಾಳಿದರು.

ಲಿಂಗೈಕ ಚಂದ್ರೇಗೌಡರು ತುಂಬು ಕುಟುಂಬಿಗಳು. ಏಳು ಗಂಡು, ನಾಲ್ಕು ಹೆಣ್ಣು ಸಂತಾನ ಪಡೆದ ಶ್ರೀಮಂತರು. ಎಲ್ಲರನ್ನೂ ಯೋಗ್ಯ ವ್ಯಕ್ತಿಗಳನ್ನಾಗಿ ಬೆಳೆಸಿದರು. ಅವರಲ್ಲಿ ಶ್ರೀ ಎ. ಸಿ. ಶಾಂತಮಲ್ಲೇಗೌಡರು ಆರನೆಯವರು.

ಶಾಂತ ಸ್ವಭಾವದ ಶ್ರೀ ಶಾಂತಮಲ್ಲೇಗೌಡರು ಪದವೀಧರರು. ಬಿ.ಎ., ಹಾಗೂ ಬಿ.ಕಾಂ., ಪದವಿಯ ನಂತರ ನ್ಯೂಯಾರ್ಕ್ ವಿದ್ಯಾಸಂಸ್ಥೆಯಿಂದ 1951ರಲ್ಲಿ ಎಂ.ಎ., ಪಡೆದರು. 1955ರಲ್ಲಿ ಗೃಹಸ್ಥಾಶ್ರಮಕ್ಕೆ ಕಾಲಿಸಿರಿದರು. ಶ್ರೀಮತಿ ಜಯಲಕ್ಷ್ಮಿ ಅವರು ಶ್ರೀಯುತರ ಬಾಳಿನ ಬೆಳಕಾಗಿ ಬಂದರು. ಎಲ್ಲ ಯಶಸ್ಸಿಗೆ ಕಾರಣರಾದರು. ಅವರ ತೌರಿನವರ ತುಂಬುಗುಣ, ದೈವಭಕ್ತಿ ಗುರುಭಕ್ತಿ ಅವರೊಂದಿಗೇ ಬಂದವು ಶಾಂತಮಲ್ಲೇಗೌಡರ ಸಿರಿಬಾಳಿಗೆ - ಕಬ್ಬಿಗೆ ಜೇನಿಟ್ಟಂತೆ. ಶ್ರೀಮತಿ ಜಯಲಕ್ಷ್ಮಿ ಅವರು ಅರಳಿದ್ದು ಸಕಲೇಶಪುರ ತಾಲ್ಲೂಕು ಬಾಳ್ಳುಪೇಟೆ ಶ್ರೀ ಬಿ. ಬಸರಪ್ಪ ದಂಪತಿಗಳ ಕುಟುಂಬದಲ್ಲಿ. ಹುಟ್ಟಿದ ಮನೆಗೂ ಕೊಟ್ಟ ಮನೆಗೂ ಹೆಸರು ತಂದ ಸುಸಂಸ್ಕೃತ ಶರಣೆ ಜಯಲಕ್ಷ್ಮಿ ಅವರು. ಅವರೊಂದು ಶ್ರುತಿ ಮಾಡಿಟ್ಟ ವೀಣೆ, ಹಚ್ಚಿಟ್ಟ ದೀಪವೆಂದೇ ಹೇಳಬೇಕು.

ಶ್ರೀ ಶಾಂತಮಲ್ಲೇಗೌಡರು ವಿದ್ಯಾವಿನಯ ಸಂಪನ್ನರು. ಸಣ್ಣದನ್ನು ಕಂಡವರಲ್ಲ, ಸಣ್ಣದಾಗಿ ನಡೆದುಕೊಂಡವರಲ್ಲ, ಅವರಿಗೆಲ್ಲವೂ ದೊಡ್ಡದೇ. ನುಡಿಯಲ್ಲಿ, ನಡೆಯಲ್ಲಿ, ಕೊಡುವಲ್ಲಿ ಹಿರಿತನಕ್ಕೆ ಹೆಸರಾಗಿದ್ದಾರೆ. ಅವರ ಮನೆತನದ ಬಳುವಳಿಯೇ ಅದು. ದುಡಿದದ್ದನ್ನು ಸಮಾಜಕ್ಕೆ ನೀಡಿ ಸಂತೋಷಿಸಿದ್ದಾರೆ. ಚಿಕ್ಕಮಗಳೂರಿನ "ಅರಳಗುಪ್ಪೆ ಮಲ್ಲೇಗೌಡ ಆಸ್ಪತ್ರೆ"ಯನ್ನು ತಂದೆ ಚಂದ್ರೇಗೌಡರು ಕಟ್ಟಿಸಿ ಸಾರ್ವಜನಿಕರಿಗೆ ಬಾಗಿಲು ತೆರೆದರೆ, ಶ್ರೀ ಶಾಂತಮಲ್ಲೇಗೌಡರು ತಮ್ಮ ಸಹೋದರರು ಮತ್ತು ಬಂಧುಗಳ ಸಹಕಾರದೊಡನೆ "ಧರ್ಮಪ್ರಕಾಶ ಅರಳಗುಪ್ಪೆ ಚಂದ್ರೇಗೌಡ ಪಾಲಿಟೆಕ್ನಿಕ್" ಶಿಕ್ಷಣ ಸಂಸ್ಥೆ ಕಟ್ಟಿ ಸಮಾಜಕ್ಕೆ ಅರ್ಪಿಸಿದರು. ಲಕ್ಷ ಲಕ್ಷ ರೂ.ಗಳನ್ನು ದಾನ ಮಾಡಿದರು. ಸೇವೆ ಮತ್ತು ದಾಸೋಹಗಳಿಗೆ ಸದಾ ಕೈ ನೀಡಿದ ಹಿರಿಯ ಗುಣ ಶ್ರೀಯುತರದು.





ಶ್ರೀ ಶಾಂತಮಲ್ಲೇಗೌಡರು ಮತ್ತು ಶ್ರೀಮತಿ ಜಯಲಕ್ಷ್ಮಿ ಅವರು ಮೂರು ಹೆಣ್ಣು, ಒಂದು ಗಂಡು ಸಂತಾನದ ಶ್ರೀಮಂತರು. ಶ್ರೀಮತಿ ಆಶಾಲತ ಶಶಿಧರ್, ಶ್ರೀಮತಿ ಉಷಾರಾಣಿ ವಿದ್ಯಾಶಂಕರ್, ಶ್ರೀಮತಿ ಅನುಪಮ ಸತೀಶ್ ಅವರು ಶ್ರೀಯುತರ ಕುಟುಂಬದ ಪುಣ್ಯದ ಕಣ್ಣುಗಳು. ಶ್ರೀ ಚಂದ್ರಪ್ರಕಾಶ್ ಮತ್ತು ಶ್ರೀಮತಿ ಲಲಿತಾಂಬಿಕ ಶಾಂತಮಲ್ಲೇಗೌಡರ ದಾನ, ದಾಸೋಹ, ಸೇವಾಜ್ಯೋತಿಯ ಹೃದಯ ದೀಪ್ತಿಗಳು. ತಂದೆಯ ದಾರಿಯಲ್ಲಿ ಹೆಜ್ಜೆ ಮೂಡಿಸುತ್ತಿರುವ ಪುಣ್ಯಜೀವಿಗಳು. ವೃತ್ತಿಯಲ್ಲಿ ಕೃಷಿಕರು, ಕಾಫಿ ಬೆಳೆಯಲ್ಲಿ ಬೆಳಕು ಕಾಣುತ್ತಿರುವ ರೈತರಾಗಿಗಳು.

ಶ್ರೀಮಂತಿಕೆ ಬರುರುದು ಮಾನವೀಯತೆಯ ಪ್ರದರ್ಶನಕ್ಕೆ, ಮಾನವೀಯತೆಯನ್ನು ಆರಾಧಿಸುವುದಕ್ಕೆ, ವ್ಯಕ್ತಿ ಪ್ರತಿಷ್ಠೆಗಲ್ಲ ಎಂಬ ಹೃದಯ ಶ್ರೀಮಂತಿಕೆಯ ಮನೆತನ ಧರ್ಮಪ್ರಕಾಶ ಅರಳಗುಪ್ಪೆ ಚಂದ್ರೇಗೌಡರ ಮನೆತನ. ಗುರು - ಲಿಂಗ, ಜಂಗಮದಲ್ಲಿ ಅಖಂಡ ಪ್ರೀತಿ ಮತ್ತು ನಿಷ್ಠೆ. ನಾಲ್ಕು ತಲೆಮಾರುಗಳವರೆಗೆ ಮನೆತನದ ಹೆಸರನ್ನು ಹಸಿರಾಗಿಸಿಕೊಂಡು ಬರುತ್ತಿರುವ ಶ್ರೀ ಶಾಂತಮಲ್ಲೇಗೌಡರು ಪುಣ್ಯಜೀವಿಗಳು; ಧನ್ಯಶೀಲರು. ತಮ್ಮ ಯಶಸ್ಸಿಗೆ ತಮ್ಮ ಧರ್ಮಪತ್ನಿ ಜಯಲಕ್ಷ್ಮಿಯವರೇ ಕಾರಣರು ಎನ್ನುವ ಸತೀ ಪ್ರೇಮಿಗಳು. "ಸತಿ ಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ" ಎನ್ನುವಂಥ ಕುಟುಂಬ ಶ್ರೀಯುತರದು. ●

---

# ಶತಾಯುಷ್ಯದ ಸಿದ್ಧಿ

-- ಪ. ರಾಮಕೃಷ್ಣಶಾಸ್ತ್ರಿ
ಶಿವಶಕ್ತಿ ನಿಲಯ
ಅಂಚೆ ಮಚ್ಚಿನ - 574295 ದ.ಕನ್ನಡ

*ನೂರು ವರುಷ ಬದುಕುವುದೆಂದರೆ ವರ್ಷಗಳನ್ನು ತುಂಬಿಸುವುದಿಲ್ಲ. ಒಂದೊಂದು ನಿಮಿಷವನ್ನು ಹತ್ತು ಜನ ಮೆಚ್ಚುವ ರೀತಿಯಲ್ಲಿ ಸದುಪಯೋಗ ಪಡಿಸಿಕೊಳ್ಳಬೇಕು. ಜೊತೆಗೆ ಆರೋಗ್ಯ ಪೂರ್ಣವಾದ ಬದುಕನ್ನು ಸಾಗಿಸಬೇಕು. ಹೀಗೆ ಬದುಕಿದಾಗ ಬದುಕಿಗೂ ಒಂದು ಅರ್ಥ ಬರುತ್ತದೆ ಎಂಬುದನ್ನು ಪ್ರಸಕ್ತ ಲೇಖನದಲ್ಲಿ ವಿಚಾರ ಮಾಡಲಾಗಿದೆ.*

ಪಶ್ಯೇಮ ಶರದಃ ಶತಂ। ಜೀವೇಮ ಶರದಃ ಶತಂ। ಶೃಣುಯಾಮ ಶರದಃ ಶತಂ.... ಇದು ವೈದಿಕ ಮಂತ್ರಗಳ ಹಾರೈಕೆ. ನಾವು ನೂರು ವರ್ಷ ಬದುಕೋಣ. ನೂರ ವರ್ಷ ಕೇಳೋಣ. ನೂರು ವರ್ಷ ದೈನ್ಯತೆಯಿಲ್ಲದೆ ಬದುಕೋಣ ಎಂದು ಅವು ಕೇಳಿಕೊಳ್ಳುತ್ತವೆ. ಆದರೆ ನೂರು ವರ್ಷ ಬದುಕುವುದೇ ಮಂತ್ರಗಳ ದೃಷ್ಟಿಯಲ್ಲಿ ಮುಖ್ಯವಾಗಿಲ್ಲ. ನಾಲಗೆಯಲ್ಲಿ ಶುದ್ಧವಾದ ಮಾತಿರಬೇಕು. ಮೂಗಿನಲ್ಲಿ ಆರೋಗ್ಯವಾದ ಪ್ರಾಣವಾಯು ಸಂಚರಿಸಬೇಕು. ಕೂದಲು ಕಪ್ಪಗಿರಬೇಕು. ಕಾಲುಗಳಲ್ಲಿ ನೆಟ್ಟಗೆ ನಿಲ್ಲುವ ಶಕ್ತಿ ಇರಬೇಕು ಎನ್ನುತ್ತಲೇ ಅವು ಇನ್ನೊಂದು ಮಾತನ್ನು ಸ್ಪಷ್ಟವಾಗಿ ಹೇಳುತ್ತವೆ ನಿನ್ನ ಆತ್ಮದಲ್ಲಿ ಹಿಂಸೆಯ ಭಾವನೆ ಇಲ್ಲದಿರಲಿ. ನಿನ್ನ ಪ್ರತಿಯೊಂದು ಅಂಗಾಂಗವೂ ಪಾಪ ಭಾವನೆಯಿಂದ ದೂರವಿರಲಿ.

ಅನಾಯಾಸೇನ ಮರಣಂ ವಿನಾ ದೈನ್ಯೇನ ಜೀವನಂ ಎಂಬುದೇ ನಿನ್ನ ಬದುಕಿನ ಗುರಿಯಾಗಿರಲಿ ಎಂದರು ಮಹಾತ್ಮರು. ಮಾನವ ನೂರು ಕಾಲ ಬದುಕುವುದೊಂದೇ ಅವರ ದೃಷ್ಟಿಯಲ್ಲಿ ಮುಖ್ಯವಾಗಿರಲಿಲ್ಲ. ಅಗ್ನಿಮಂತ್ರವನ್ನು ಪಠಿಸುತ್ತ ಮಾನವ, ನಮ್ಮನ್ನು ಒಳ್ಳೆಯ ದಾರಿಯಲ್ಲಿ ನಡೆಸು. ನಮ್ಮ ಪಾಪಗಳನ್ನು ಕಳೆ ಎಂದು ಪ್ರಾರ್ಥಿಸುತ್ತಾನೆ. ಸವಿತೃ ದೇವತೆಯೊಂದಿಗೆ ಧಿಯೋ ಯೋನಃ ಪ್ರಚೋದಯೊಸ್ ನಮ್ಮ ಬುದ್ಧಿ ಶ್ರೇಷ್ಠ ಕರ್ಮಗಳತ್ತ ತಿರುಗುವಂತೆ ಪ್ರೇರೇಪಿಸು ಎಂದು

ಕೇಳಿಕೊಳ್ಳುತ್ತಾನೆ. ಸ್ವರ್ಗ, ಅಂತರಿಕ್ಷಗಳಾಗಲಿ, ಔಷಧಿ, ವನಸ್ಪತಿಗಳಾಗಿ ಎಲ್ಲವೂ ನನಗೆ, ಈ ಜಗದ ಎಲ್ಲ ಜೀವಗಳಿಗೆ ಶಾಂತಿದಾಯಕವಾಗಲೆಂದು ಯಾಚಿಸುತ್ತಾನೆ.

ಆದರೆ ಯಾಂತ್ರಿಕ ಯುಗದಲ್ಲಿ ಯಂತ್ರಗಳನ್ನೇ ತನ್ನ ಸುಖೋಪಭೋಗಗಳಿಗಾಗಿ ದುಡಿಸಿಕೊಳ್ಳುತ್ತಿರುವ ಮಾನವ ತನ್ನ ಹೃದಯವು ಮಿಡಿಯುವ ಭಾವನೆಗಳನ್ನೂ ಮಂತ್ರದ ನಿಟ್ಟುಸಿರಿನಂತೆ ಬಿಡಬೇಕೆ? ಅವನ ನಡತೆ, ಸಹಜವಾಗಿದ್ದು ಸ್ಫುರಿಸಬೇಕಾದ ಗುಣಗಳೆಲ್ಲವೂ ಯಂತ್ರಕೃತಿಗಳಾಗಬೇಕೆ? ವಿಜ್ಞಾನವು ಎಷ್ಟೇ ಬೆಳೆದಿದ್ದರೂ ಅದು ಮಾನವೀಯತೆಯನ್ನು ಮೃಗತ್ವಕ್ಕೆ ಪರಿವರ್ತಿಸಬಲ್ಲಷ್ಟು ಕಠೋರವಾಗಿಲ್ಲ. ಹೆತ್ತಬ್ಬೆಯ ಸ್ತನ್ಯಪಾನ ಇಂದಿಗೂ ಅಮೃತತುಲ್ಯವೆಂದು ವಿಜ್ಞಾನ ಹೇಳುತ್ತದೆ. ನವಮಾಸ ತುಂಬದೆ ಗರ್ಭದಿಂದ ಹೊರಬಂದು ಸೃಷ್ಟಿಯ ಸೊಬಗಿನೊಂದಿಗೆ ಅಂಬೆಗಾಲಿಕ್ಕಲು ನಾವಿನ್ನೂ ಸಾಧ್ಯರೆನಿಸಿಲ್ಲ. ಆಸ್ತಿಕವಾದವನ್ನು ಸುಳ್ಳೆಂದು ಬೊಬ್ಬಿರಿಯುವಾಗಲೂ ಕೋಳಿ ಮೊದಲೋ ಮೊಟ್ಟೆ ಮೊದಲೋ ಎಂಬ ಮಹಾರಹಸ್ಯದ ಚಿಪ್ಪನ್ನು ಒಡೆಯಲು ನಮ್ಮ ಮುಷ್ಟಿಗಳನ್ನು ಬಲಿಷ್ಠವಾಗಿಲ್ಲ. ಹೀಗಿರುವಾಗ ನಾವು ನಾವಾಗಬೇಕಾದರೆ ಅಗತ್ಯವಾದ ಕೆಲವೊಂದು ಗುಣಾಂಶಗಳ ಚೌಕಟ್ಟಿನಿಂದ ಹೊರಗೆ ಬರಲು ಇನ್ನೂ ಕಾಲ ಸಮರ್ಥವಾಗಿಲ್ಲ.

ಯಾಜ್ಞವಲ್ಕ್ಯರು ಹೇಳುತ್ತಾರೆ, 'ಈ ಪೃಥ್ವಿಯಷ್ಟು ಧನ ದೊರೆತರೂ ಅದರಿಂದ ನಿಜವಾದ ಸುಖ ಲಭಿಸುವುದಿಲ್ಲ ಎಂದು. ಧನವು ದುಃಖವನ್ನು ತರುತ್ತದೆ. ಶ್ರೇಯಸ್ಸು ಸುಖವನ್ನು ನೀಡುತ್ತದಂತೆ' ಆದರೆ ಧನಸಂಗ್ರಹಕ್ಕಾಗಿ ಎಂತಹ ದುಃಖಕ್ಕೂ ಸಿದ್ಧನೆನ್ನುವ ಮಾನವ ಅದರಿಂದ ಅಪಕೀರ್ತಿ ಬಂದರೂ ಅಂಜುವುದಿಲ್ಲ. ಹಣ ಸಂಗ್ರಹದಿಂದ ನಾನಾ ತರದ ದುಃಖಗಳು ಪ್ರಾಪ್ತವಾದರೂ ಹಣವೊಂದಿದ್ದರೆ ಅದನ್ನು ಎದುರಿಸಬಲ್ಲೆ ಎನ್ನುತ್ತಾನೆ. ಇಂದ್ರಿಯಗಳು ಹುಚ್ಚು ಕುದುರೆಗಳು. ಇದಕ್ಕೆ ವಿವೇಕವು ಸಾರಥಿ. ಮನಸ್ಸಿನ ಕಡಿವಾಣವು ಕೈಯಲ್ಲಿದ್ದರೆ ಸುಖವು ಸಾಧ್ಯವಂತೆ.

ಆದರೆ ಮಾನವನಿಗೆ ನೂರು ವರ್ಷ ಬದುಕಿದರೂ ಇನ್ನೂ ಒಂದು ವರುಷ ಬದುಕಿರುವ ಮೋಹ. ಬದುಕಿಗಾಗಿ ಸುಳ್ಳಾಡಬಲ್ಲ. ಪರರ ಬದುಕನ್ನು ಹದಗೆಡಿಸಬಲ್ಲ. ಇನ್ನೊಬ್ಬರ ನೋವನ್ನು ನೋಡಿ ಸಂತೃಪ್ತಿ ಹೊಂದಬಲ್ಲ 'ಸತ್ಯ ಮೇವ ಜಯತೆ ನಾನೃತಂ ಸತ್ಯೇನ ಪಂಥಾ ವಿತತೋ ದೇವಯಾನಃ' ಸತ್ಯಕ್ಕೇ ಜಯ ಅಸತ್ಯಕ್ಕೆ ಅಲ್ಲ ಎಂಬುದನ್ನರಿತೂ ತನ್ನ ಸುಖೀ ಬದುಕಿಗೆ ಸುಳ್ಳಿನಿಂದಲೇ ಪಂಚಾಂಗ ಕಟ್ಟಬಲ್ಲ. ಬದುಕಿದ್ದಾಗಲೇ ಕರಫಲವನ್ನು ಆತ ಉಣ್ಣಬಲ್ಲ.

ಶತಮಾನಂ ಭವತಿ ಎಂದು ನೂರು ವರ್ಷ ಬದುಕಲು ಋಷಿಮುನಿಗಳು ಹಾರೈಸುವಾಗಲೇ ಊರಿಗೆ ಮುಳ್ಳಾಗಿ ಬದುಕು ಎಂದು ಎಂದಿಗೂ ಆಶಿಸಿರಲಿಲ್ಲ. ಬ್ರಹ್ಮಚರ್ಯದಿಂದ ಬದುಕು ಎಂದರು. ಯತ್ ತಪೋ ದಾನಮಾರ್ಜನವಮ ಹಿಂಸಾ ಸತ್ಯವಚನಮಿತಿ ತಾ ಅಸ್ಯ ದಕ್ಷಿಣಾಃ. ಅಂದರೆ ತಪಸ್ಸು ಮಾಡು, ದಾನ ಮಾಡು, ಸರಳ ಜೀವನ ನಡೆಸು, ಯಾರನ್ನೂ ಪೀಡಿಸದಿರು, ಸತ್ಯ ಹೇಳು, ಕೋಪದಿಂದ ದೂರವಿರು, ಜಿಪುಣತನ ತೊರೆ, ಎಲ್ಲ ಜೀವಿಗಳಿಗೆ ಅಭಯ ಕೊಡು. ಹಿರಿಯರನ್ನು ಗೌರವಿಸು, ಯಾರ ಪಾಲಿಗೂ ಭಯೋತ್ಪಾದಕ ನಾಗಬೇಡ ಎಂದರು.

ಸಹನಾಭವತು ಎನ್ನುತ್ತೇವೆ. ಎಲ್ಲರೂ ಜೊತೆಗೂಡಿ ದುಡಿಯೋಣ, ನಮ್ಮ ಶಕ್ತಿ ಸಾಮರ್ಥ್ಯ ಬೆಳೆಯಲಿ ಪರಸ್ಪರ ಹಗೆತನ ಬೇಡ ಎಂದು ಉಚ್ಚರಿಸುತ್ತೇವೆ. ಆದರೆ ಹೀಗೆ ಬದುಕುತ್ತಿದ್ದೇವೆಯೆ? ಆತ್ಮಾವಲೋಕನಕ್ಕೆ ಇದು ಅಗತ್ಯವಾದ ಕಾಲ.

## ವಾಂತಿ ನಿಲ್ಲುವುದಕ್ಕೆ

ನಿಂಬೆ ಹಣ್ಣಿನ ರಸದಲ್ಲಿ ಸಕ್ಕರೆ ಸೇರಿಸಿ ಸ್ವಲ್ಪ ಸ್ವಲ್ಪವೆ ನೆಕ್ಕುತ್ತಿದ್ದರೆ ವಾಂತಿ ನಿಲ್ಲುವುದು. ಒಂದು ಲೋಟ ಎಳನೀರಿಗೆ 3-4 ಚಿಟಿಕೆ ಏಲಕ್ಕಿ ಚೂರ್ಣ 2 ಊಟದ ಚಮಚದಷ್ಟು ಜೇನುತುಪ್ಪ ಸೇರಿಸಿ ಸೇವಿಸಿದರೆ ವಾಂತಿ ನಿಲ್ಲುವುದು. ವಾಂತಿಯು ಹೆಚ್ಚು ಆಗುತ್ತಿದ್ದರೆ ಈ ಉಪಚಾರವನ್ನು ದಿನಕ್ಕೆ 2 ಸಲದಂತೆ 2-3 ದಿನಗಳವರೆಗೆ ಕೊಡಬೇಕು.

## ಕಫ ನಿವಾರಣೆಗೆ

ಒಂದು ಹರಳು ಉಪ್ಪು ಮತ್ತು ಒಂದು ಲವಂಗವನ್ನು ಬಾಯಿಯಲ್ಲಿ ಇಟ್ಟುಕೊಂಡು ಚಪ್ಪರಿಸುತ್ತಿದ್ದರೆ ಕಫ ನಿವಾರಣೆಯಾಗುವುದು. ಒಂದು ವೀಳೆದೆಲೆಯೊಂದಿಗೆ ನಾಲ್ಕೈದು ಮೆಣಸುಕಾಳು ಮತ್ತು ಒಂದೆರಡು ಹರಳು ಉಪ್ಪು ಅಗಿದು ತಿನ್ನುವುದರಿಂದ ಕಫ ನಿವಾರಣೆಯಾಗುವುದು.





# ಕಾಡು ಬೆಳೆಸಿ ನಾಡು ಕಟ್ಟೋಣ

-- ಎಚ್. ಎಸ್. ಸಿದ್ಧಗಂಗಪ್ಪ

ನಮ್ಮ ರಾಷ್ಟ್ರದ ಅಮೂಲ್ಯ ಪ್ರಾಕೃತಿಕ ಹಾಗೂ ನೈಸರ್ಗಿಕ ಸಂಪತ್ತಾದ ಅರಣ್ಯ ಹಲವಾರು ಕಾರಣಗಳಿಂದ ನಾಶವಾಗುತ್ತಿದೆ. ಕಾಡು ಬೆಳೆಸಿ ನಾಡು ಕಟ್ಟುವ ಬದಲು, ಕಾಡು ಕಡಿದು ನಾಡನ್ನು ಕಟ್ಟಲಾಗುತ್ತಿದೆ. ಇದರಿಂದ ಪರಿಸರದ ಮೇಲೆ ಪ್ರತಿಕೂಲ ಪರಿಣಾಮ ಉಂಟಾಗುತ್ತಿದೆ. ನಮ್ಮ ದೇಶದಲ್ಲಿ ಒಂದು ಅಂದಾಜಿನ ಪ್ರಕಾರ ಪ್ರತಿ ವರ್ಷ 10 ಲಕ್ಷ ಹೆಕ್ಟೇರು ಅರಣ್ಯ ಕೃಷಿ ಭೂಮಿಯ ವಿಸ್ತರಣೆ, ಜಲವಿದ್ಯುತ್ ಹಾಗೂ ನೀರಾವರಿ ಜಲಾಶಯಗಳ ನಿರ್ಮಾಣ, ಕೈಗಾರಿಕೆಗಳ ಬೆಳವಣಿಗೆ, ವಸತಿ ನಿರ್ಮಾಣ, ಉರುವಲು ಇತ್ಯಾದಿ ಕಾರಣಗಳಿಂದಾಗಿ ಕರಗುತ್ತಿದೆ. ಈ ಪ್ರಮಾಣ ಹೀಗೆಯೇ ಮುಂದುವರಿದರೆ ಜನಸಮುದಾಯ ಹಾಗೂ ಪ್ರಾಣಿ ಸಂಕುಲ ಭೀಕರ ಪರಿಣಾಮವನ್ನು ಎದುರಿಸಬೇಕಾಗುತ್ತದೆ. ಹಾಗಾಗದಂತೆ ನೋಡಿಕೊಳ್ಳಲು ಪ್ರತಿಯೊಬ್ಬರ ಕರ್ತವ್ಯವಾಗಬೇಕು.

ಅರಣ್ಯ ನಮ್ಮ ನಾಡಿನ, ರಾಷ್ಟ್ರದ ಸಂಪತ್ತು. ಮಾನವ ಹಾಗೂ ಪ್ರಾಣಿ ಸಮುದಾಯಕ್ಕೆ ನೀಡಿದ ಪ್ರಕೃತಿದತ್ತವಾದ ಈ ಸಂಪತ್ತು ಅಮೂಲ್ಯ ಕೊಡುಗೆ. ಅರಣ್ಯದಿಂದ ನೆಲ, ಜಲ ಹಾಗೂ ಹವೆ ಈ ಮೂರರ ರಕ್ಷಣೆಯೂ ಆಗುತ್ತದೆ. ಭೂಮಿಯ ಸವಕಳಿ ತಪ್ಪಿಸುವಲ್ಲಿ, ಅರಣ್ಯದ ಪಾತ್ರ ಮಹತ್ವ ಪೂರ್ಣ. ದನಕರುಗಳಿಗೆ ಮೇವಿಗಾಗಲಿ, ಅಡುಗೆ ಮಾಡಲು ಕಟ್ಟಿಗೆಗಾಗಲಿ, ಕಟ್ಟಡಗಳಿಗೆ ಬಳಸುವ ಮರಮುಟ್ಟುಗಳಿಗಾಗಲಿ ಎಲ್ಲದಕ್ಕೂ ಈ ಅರಣ್ಯವೇ ಆಧಾರ.

ಅರಣ್ಯಗಳು ಆಮ್ಲಜನಕದ ಬ್ಯಾಂಕುಗಳು ಎಂಬ ತಜ್ಞರ ಅಭಿಪ್ರಾಯ ಅರ್ಥ ಪೂರ್ಣ. ಪರಿಸರ ಸಮತೋಲನಕ್ಕೆ ಅವುಗಳ ಕಾಣಿಕೆ ಬೆಲೆ ಕಟ್ಟಲಾಗುವುದಿಲ್ಲ. ಯಾವುದೇ ರಾಷ್ಟ್ರದಲ್ಲಿ ಪರಿಸರ ಸಮತೋಲನದ ದೃಷ್ಟಿಯಿಂದ ಆ ರಾಷ್ಟ್ರದ ಒಟ್ಟು ವಿಸ್ತೀರ್ಣದ ಮೂರನೆಯ ಒಂದು ಭಾಗದಷ್ಟು ಅರಣ್ಯ ಸಂಪತ್ತಿರಬೇಕು. ನಮ್ಮ ದೇಶದಲ್ಲಿ ಹಾಗಿದೆಯೇ?



ಇತ್ತೀಚೆಗೆ ಅರಣ್ಯ ಪ್ರದೇಶ ದಿನದಿಂದ ದಿನಕ್ಕೆ ಕಡಿಮೆಯಾಗುತ್ತಿದೆ. ನಿಜಕ್ಕೂ ಇದು ಕಳವಳಕಾರಿ ಅಂಶ. ಒಂದು ಅಂದಾಜಿನ ಪ್ರಕಾರ ನಮ್ಮ ದೇಶದಲ್ಲಿ ಪ್ರತಿ ವರ್ಷ 10ಲಕ್ಷ ಹೆಕ್ಟೇರಿನಷ್ಟು ಅರಣ್ಯ ನಾಶವಾಗುತ್ತಿದೆ. ಇದಕ್ಕೆ ಕಾರಣಗಳು ಅನೇಕ, ಕೃಷಿ ಭೂಮಿಯ ವಿಸ್ತೀರ್ಣ, ಜಲವಿದ್ಯುತ್ ಮತ್ತು ನೀರಾವರಿ ಜಲಾಶಯಗಳ ನಿರ್ಮಾಣ, ಕೈಗಾರಿಕೆಗಳ ಬೆಳವಣಿಗೆ, ಅಡುಗೆ ಮಾಡಲು ಉರವಲು ಬಳಕೆ, ಅಗತ್ಯವಿರುವ ಕಡೆ ರಸ್ತೆ ನಿರ್ಮಾಣ, ವಸತಿ ನಿರ್ಮಾಣ, ಹೀಗೆ ಕಾರಣಗಳ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ. ಈ

ಪಟ್ಟಿಗೆ ಅನುಗುಣವಾಗಿ ಅರಣ್ಯವೂ ನಾಶವಾಗುತ್ತಿದೆ. 'ಸಮೃದ್ಧ ಕಾಡಿನಿಂದ ಸಮೃದ್ಧ ಮಳೆ' ಎನ್ನುವ ಮಾತಿನ ಸತ್ಯವನ್ನು ಪ್ರತಿಯೊಬ್ಬರೂ ಅರ್ಥ ಮಾಡಿಕೊಳ್ಳಬೇಕು.

ಒಂದು ಹಿರಿದಾದ ಮರ ಒಂದು ಮೋಟಾರು ವಾಹನ ಒಂದು ದಿನದಲ್ಲಿ ಹೊರಬಿಡುವಷ್ಟು ಇಂಗಾಲಾಮ್ಲದಷ್ಟೇ ಪ್ರಮಾಣದ ಆಮ್ಲಜನಕವನ್ನು ಹೊರಬಿಡುತ್ತದೆ. ಒಂದು ಎಕರೆ ಪ್ರದೇಶದಲ್ಲಿ ಬೆಳೆದ ಮರಗಳು ಒಂದು ವರ್ಷದಲ್ಲಿ 4 ಟನ್ ಹಿಂಗಾಲಾಮ್ಲವನ್ನು ಹೀರಿಕೊಂಡು 8 ಟನ್ ಆಮ್ಲಜನಕ ಹೊರ ಬಿಡುತ್ತವೆ. ಮಾನವನ ಬದುಕಿಗೆ ಸಹಕಾರಿಯಾಗುವ ಬಹು ಉಪಕಾರಿಯಾದ ಅರಣ್ಯ ಸಂಪತ್ತನ್ನು ಅನಗತ್ಯವಾಗಿ ನಾಶಪಡಿಸುತ್ತಿದ್ದೇವೆ. ಕ್ಷೇತ್ರ ತಜ್ಞರ ಪ್ರಕಾರ ದೇಶದಲ್ಲಿ 3 ನಿಮಿಷಕ್ಕೆ ಒಂದು ಹೆಕ್ಟೇರ್ ಅರಣ್ಯ ನಾಶವಾಗುತ್ತಿದೆ. ಅಂದರೆ ದಿನಕ್ಕೆ 480 ಹೆಕ್ಟೇರ್, ವರ್ಷಕ್ಕೆ 1,75,200 ಹೆಕ್ಟೇರ್ ಅರಣ್ಯ ಈಗಾಗಲೇ ತಿಳಿಸಿದಂತೆ ವಿವಿಧ ಕಾರಣಗಳಿಗಾಗಿ ನೆಲಸಮವಾಗುತ್ತಿದೆ. ಇದನ್ನು ಗಂಭೀರವಾಗಿ ಯೋಚಿಸಿ ಸೂಕ್ತ ಪರಿಹಾರ ಕಂಡುಕೊಳ್ಳಬೇಕು.

**ಪರಿಸರ ರಕ್ಷಣೆ**

ಪರಿಸರ ಸಂರಕ್ಷಣೆಯ ಒಂದು ಮಹತ್ವದ ಕ್ರಮವಾಗಿ ಅರಣ್ಯ ಪ್ರದೇಶದ ವಿಸ್ತರಣೆ ಮತ್ತು ಸಾಮಾಜಿಕ ಅರಣ್ಯ ಬೆಳೆಸುವ ಕಾರ್ಯ ತ್ವರಿತವಾಗಿ ನಡೆಯಬೇಕಾಗಿದೆ. ಗ್ರಾಮೀಣ ಪ್ರದೇಶದಲ್ಲಿ ಸರ್ಕಾರ ಹಮ್ಮಿಕೊಂಡಿರುವ ಸಾಮಾಜಿಕ ಅರಣ್ಯವನ್ನು ಬೆಳೆಸುವ ಕಾರ್ಯಕ್ರಮ ಯಶಸ್ವಿಯಾಗಬೇಕಾದರೆ ಅಲ್ಲಿನ ಜನತೆಯ ಉತ್ಸಾಹ, ಸಹಕಾರ ಅಗತ್ಯವಾಗಿ ಬೇಕಾಗುತ್ತದೆ.

**ವನ್ಯಜೀವಿನಗಳ ಸಂರಕ್ಷಣೆ**

ಆರ್ಥಿಕ ಸುಧಾರಣೆಯ ದೃಷ್ಟಿಯಿಂದಲೂ ಅರಣ್ಯ ಸಂಪತ್ತು ಅತ್ಯಂತ ಬೆಲೆಬಾಳುವಂತಹದು. ಅರಣ್ಯ ಸಂರಕ್ಷಣೆಯ ಮತ್ತೊಂದು ಪ್ರಮುಖವಾದ ಅಂಶವೆಂದರೆ ವನ್ಯಜೀವಿಗಳ ಸಂರಕ್ಷಣೆ. ಸಮೃದ್ಧವಾದ ಹಚ್ಚಹಸಿರಿನಿಂದ ಕೂಡಿದ ಕಾಡಿನಲ್ಲಿ ಮುಕ್ತವಾಗಿ ಓಡಾಡಿಕೊಂಡಿರುವ ವನ್ಯಜೀವಿಗಳನ್ನು ನೋಡುವುದೇ ಕಣ್ಣಿಗೆ ಒಂದು ಸುಂದರವಾದ ಅನುಭವ. ಕಾಡುಗಳ ವಿಸ್ತೀರ್ಣ ಕುಗ್ಗಿದಂತೆ ವನ್ಯ ಪ್ರಾಣಿಗಳ ಸಂಖ್ಯೆಯೂ ಕಡಿಮೆ ಆಗುತ್ತಿದೆ.

ಅಂಕಿ ಅಂಶಗಳ ಪ್ರಕಾರ ಪ್ರಪಂಚದಲ್ಲಿ ಪ್ರತಿನಿತ್ಯ 140 ಜಾತಿಯ ಸಸ್ಯ ಹಾಗೂ ಪ್ರಾಣಿಗಳು ನಾಶವಾಗುತ್ತಿವೆ. ಪ್ರತಿ ವರ್ಷ 17 ದಶಲಕ್ಷ ಹೆಕ್ಟೇರ್‌ನಷ್ಟು ಕಾಡು ಹಾಳಾಗುತ್ತಿದೆ. ಮತ್ತೊಂದು ಕಡೆ ಪ್ರತಿ ವರ್ಷ 92 ದಶಲಕ್ಷ ಜನಸಂಖ್ಯೆ ಹೆಚ್ಚುತ್ತಿದೆ.

ಮಾನವ ತನ್ನ ಸುಖಕ್ಕಾಗಿ ಬಲಪ್ರಯೋಗ ಮಾಡಿದುದರ ಪರಿಣಾಮವಾಗಿ ಜೀವಿ ವಿಜ್ಞಾನದ ಮತ್ತು ನಿಸರ್ಗದ ಅಸಮತೋಲನ ಉಂಟಾಯಿತು. ಅರಣ್ಯ ನಾಶದಿಂದ ಸಸ್ಯ ಸಂಪತ್ತು ನಾಶವಾಗುತ್ತಿದೆ. ಇದರಿಂದ ಅತಿವೃಷ್ಟಿ ಹಾಗೂ ಅನಾವೃಷ್ಟಿಗಳಿಗೆ ಎಡೆ ಮಾಡಿಕೊಟ್ಟಿದೆ.

**ಸಾಮಾಜಿಕ ಅರಣ್ಯ**

ಸರ್ಕಾರ ಅರಣ್ಯ ಸಂಪತ್ತನ್ನು ಹೆಚ್ಚಿಸಲು ವ್ಯಾಪಕ ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ. 'ಹಸಿರೇ ಉಸಿರು' ಎನ್ನುವ ಕಡೆ ಜನರ ಗಮನವನ್ನು ವಿಶಿಷ್ಟವಾದ ಕಾರ್ಯಕ್ರಮಗಳನ್ನು ರೂಪಿಸುವುದರ ಮೂಲಕ ಗಮನ ಸೆಳೆಯುವ ಪ್ರಯತ್ನ ಮಾಡಲಾಗುತ್ತಿದೆ. ಇದಕ್ಕಾಗಿ ಸರ್ಕಾರ ಸಾಮಾಜಿಕ ಅರಣ್ಯದಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.

ರಾಜ್ಯದ ಬಯಲು ಸೀಮೆಯಲ್ಲಿರುವ ಕೃಷಿಗೆ ಯೋಗ್ಯವಲ್ಲದ ಬಂಜರುಭೂಮಿ, ಗೋಮಾಳ, ರಸ್ತೆ ಹಾಗೂ ಕಾಲುವೆ ದಂಡೆ, ಕೆರೆ ಅಂಗಳ, ಖಾಸಗಿ ಭೂಮಿ ಮುಂತಾದ ಸ್ಥಳಗಳಲ್ಲಿ ಉಪಯುಕ್ತವಾದ ಗಿಡಮರಗಳನ್ನು ಬೆಳೆಸಿ ಬರಡು ಭೂಮಿಯನ್ನು ಹಸಿರು ಮಾಡುವುದು ಸಾಮಾಜಿಕ ಅರಣ್ಯದ ಉದ್ದೇಶ.

**ಕಾಡಿದ್ದರೆ ನಾಡು**

ಮರಗಳಿಂದ ಬಳಕೆಗೆ ಬೇಕಾಗುವ ಉರುವಲು, ದನಕರುಗಳಿಗೆ ಮೇವು, ತಿನ್ನಲು ಹಣ್ಣು ಹಂಪಲು, ಅಲಂಕಾರಕ್ಕೆ ಹೂವು ಮತ್ತು ಅರಣ್ಯ ವಸ್ತುಗಳಿಂದ ಅನೇಕ ರೋಗಗಳಿಗೆ ಉಪಯುಕ್ತವಾಗುವ ಔಷಧಿಗಳಿಗೆ ಬೇಕಾದ ಗಿಡ ಮೂಲಿಕೆಗಳು ದೊರೆಯುತ್ತವೆ. ಹೀಗೆ ಹಲವಾರು ರೀತಿಯಲಿ ಮರಗಳು ನಮಗೆ ಪ್ರಯೋಜನಕಾರಿಯಾಗಿವೆ. ಒಟ್ಟಿನಲ್ಲಿ 'ಕಾಡಿದ್ದರೆ ನಾಡು' ಎಂಬ ಗಾದೆಮಾತು ನಮಗೆ ಸದಾ ಮನಸ್ಸಿನಲ್ಲಿ ಹಚ್ಚ ಹಸಿರಾಗಿರಬೇಕು. ಕಾಡು ಕಡಿದು ನಾಡು ಬೆಳೆಸುವುದಲ್ಲ; ಕಾಡು ಬೆಳೆಸಿ ನಾಡು ಕಟ್ಟಬೇಕು.

ಗ್ರಾಮೀಣ ಪ್ರದೇಶದಲ್ಲಿ ರೈತರು ತಮಗಿರುವ ಭೂಮಿಯಲ್ಲಿಯೇ ಉಪಯುಕ್ತವಾದ ಮರಗಳನ್ನು ಬೆಳೆಸುವುದರ ಮೂಲಕ ಅರಣ್ಯ ಸಂಪತ್ತನ್ನು ಉಳಿಸಬಹುದು. ಬೆಳೆಸಬಹುದು. ರೈತರ ಅನುಕೂಲಕ್ಕೆ ಹಾಗೂ ಸೂಕ್ತ ಮಾಹಿತಿಗಾಗಿ ಕೆಲವು ಗಿಡ ಮರಗಳ ಬಗ್ಗೆ ಮುಂದಿನ ಸಂಚಿಕೆಯಿಂದ ಪರಿಚಯ ಮಾಡಿಕೊಡಲು ಉದ್ದೇಶಿ ಸಲಾಗಿದೆ. ಇದರ ಲಾಭವನ್ನು ರೈತರು ಪಡೆದುಕೊಂಡರೆ ನಮ್ಮ ಉದ್ದೇಶ ಸಫಲವಾದಂತೆ.

●





# ಬದುಕು : ಒಂದು ಚಿಂತನೆ

-- ರಾಜಶೇಖರ ಬ. ಜಮದಂಡಿ
ಶಿವಕುಮಾರ ನಿಲಯ
ಪಟೇಲ್ ಹೈಸ್ಕೂಲ್ ಹತ್ತಿರ, ಬಳ್ಳಾರಿ ರಸ್ತೆ
ಹೊಸಪೇಟೆ.

*ಬದುಕು ಮತ್ತು ಕಾಲ ಒಂದೇ ನಾಣ್ಯದ ಎರಡು ಮುಖಗಳು. ಯಾವ ವ್ಯಕ್ತಿ ಕಾಲಕ್ಕೆ ಮಹತ್ವ ಕೊಡುತ್ತಾನೋ ಬದುಕನ್ನು ಅರ್ಥಪೂರ್ಣವಾಗಿಸಿ ಕೊಳ್ಳುತ್ತಾನೆ ಕಾಲವನ್ನು ಸಮರ್ಥವಾಗಿ ದುಡಿಸಿಕೊಂಡರೆ ಕಾಲ ಅವನನ್ನು ಅಭಿವೃದ್ಧಿ ಪಥದಲ್ಲಿ ಮುನ್ನಡೆಯುವಂತೆ ಮಾಡುತ್ತದೆ. 'ಹೊತ್ತು ಕಳೆದರೆ ಹೋಯಿತು, ಮುತ್ತು ಒಡೆದರೆ ಹೋಯಿತು' ಎಂಬ ಗಾದೆ ಕಾಲದ ಮಹತ್ವವನ್ನು ಪರಿಚಯ ಮಾಡಿಕೊಡುತ್ತದೆ.*

ಜೀವನ ಎಂದರೆ ಜೀವಿಸು, ಬದುಕು, ಉಸಿರಾಡು ಎಂಬರ್ಥಗಳಿವೆ. ನಮ್ಮ - ಸುಗಮವಾಗಿ ನಡೆಯುವುದಕ್ಕೆ ಪ್ರಕೃತಿಯಲ್ಲಿರುವ ಬೆಂಕಿ, ಗಾಳಿ, ನೀರು, ಬೆಳಕು, ಭೂಮಿ ಈ ಪಂಚಭೂತಗಳು ಪ್ರತಿಯೊಬ್ಬನಿಗೂ ಅತ್ಯವಶ್ಯಕ. ಆದರೆ ಇವುಗಳೊಂದಿಗೆ ಸರಿಯಾದ ದುಡಿಮೆಯೊಂದಿರಬೇಕು. ಉಸಿರು ನಿಲ್ಲುವವರೆಗೂ ಯಾವುದಾದರೊಂದು ಕಾಯಕ ಮನುಷ್ಯನಿಗೆ ಬೇಕು. ಆ ಮೂಲಕ ಜೀವನವನ್ನು ಉತ್ತಮವಾಗಿ ರೂಪಿಸಿಕೊಳ್ಳಬಹುದು. ಇಲ್ಲಿ ಜೀವನವೆಂಬ ಪದವನ್ನು ಬದುಕು ಎಂಬ ಸಮಾನಾರ್ಥದಲ್ಲಿ ತೆಗೆದುಕೊಳ್ಳಲಾಗಿದೆ.

ಬದುಕು ಸರ್ವೇಸಾಮಾನ್ಯವಾಗಿ ಬಳಸುವ ಪದವಾದರೂ ಇದು ಸುಲಭವಾಗಿ ವಿವರಣೆಗೆ ಸಿಗುವಂತಹುದಲ್ಲ. ಬದುಕು - ವ್ಯಕ್ತಿಗಳನ್ನಾಧರಿಸಿ ಅವರ ಮನೋಭಾವ, ಪರಿಸರ, ಪ್ರಭಾವಗಳನ್ನಾಧರಿಸಿ ವಿಭಿನ್ನವಾಗಿ ಕಾಣಿಸುತ್ತದೆ. ಬದುಕೆಂಬುದು ವ್ಯಾಕರಣದಲ್ಲಿ ನಾಮಪದವಾಗಿಯೂ, ಕ್ರಿಯಾಪದವಾಗಿಯೂ ಬರುತ್ತದೆ. ಬದುಕು ನಾಮಪದವಾದಾಗ ಅದು ಎಲ್ಲರಿಗೂ ಸಮಾನವಾದದ್ದು. ಕ್ರಿಯಾಪದವಾದಾಗ ಸಂಬಂಧಿಸಿದ ವ್ಯಕ್ತಿಗಷ್ಟೇ ಅವಲಂಬಿತವಾದದ್ದು. ಬದುಕನ್ನು ನಾವು ಹೇಗೆ ಸ್ವೀಕರಿಸುತ್ತೇವೆಂಬುದೂ ನಮ್ಮನಮ್ಮ ಮನೋಧರ್ಮಕ್ಕೆ ಬಿಟ್ಟದ್ದು. ವ್ಯಾಕರಣದ ಬಗೆಗಿನ ಈ ಪದದ ಅರ್ಥವನ್ನು ಬಲ್ಲವರೂ ಬಾಳುತ್ತಾರೆ ಬಲ್ಲದವರೂ ಬಾಳುತ್ತಾರೆ. ಈ ಎರಡೂ ಸಾಧ್ಯತೆಗಳ ನಡುವೆ ನಿಜವಾದ ಬದುಕೆಂದರೇನೆಂಬ ಮೂಲಭೂತ ಪ್ರಶ್ನೆ ಬರುತ್ತದೆ. ಆದೇಶಾತ್ಮಕ ಕ್ರಿಯಾಪದವನ್ನಾಗಿ ಸ್ವೀಕರಿಸಿಕೊಂಡು ಜೀವನದುದ್ದಕ್ಕೂ ನೋವು-ನಲಿವುಗಳ ಪ್ರಕ್ರಿಯೆಯೊಳಗೆ ಸಮವಾದ ಬೆಲೆ ನೀಡುವುದೇ ಬದುಕೆನ್ನಬಹುದು.

ಪ್ರತಿಯೊಬ್ಬರ ಬದುಕು ಕಿರಿದೊರೆಯಾಗಿ ಆರಂಭವಾಗುತ್ತದೆ. ಅದನ್ನಷ್ಟಕ್ಕೇ ಬಿಡದೇ ಕ್ರಮೇಣ ದೊಡ್ಡ ಜಲಪಾತವಾಗಿ ಅನಂತತೆಯ ಕಡಲನ್ನು ಸೇರುವಂತೆ ಕಾಪಾಡಿಕೊಳ್ಳಬೇಕಷ್ಟೆ. ಬದುಕು ನಕಾರಾತ್ಮಕವಲ್ಲ ಅದು ಸಕಾರಾತ್ಮಕವಾಗಿದೆ. ಓದದೇ ಇದ್ದವನು ಪರೀಕ್ಷೆಯಲ್ಲಿ ತೇರ್ಗಡೆಯಾಗಬೇಕೆಂದು ಹಟ ಹಿಡದರೆ ಅದು ಹೇಗೆ ಸಾಧ್ಯ? ಬದುಕಿನಲ್ಲಿ ಶ್ರಮವಿಲ್ಲದೆಯೇ ಸುಖ ಹೇಗೆ ಬಂದೀತು? ಕಷ್ಟವೆಂಬುದು ಮನುಷ್ಯನನ್ನು ಬೆಳೆಸುವಂತಹ ಗುಣವುಳ್ಳದ್ದು, ಕಷ್ಟಗಳನ್ನು ನಿಜವಾಗಿ ಎದುರಿಸುವವನೇ ಸುಖಗಳನ್ನು ನಿಜವಾಗಿ ಪಡೆಯುವನು. ಕ್ರಮೇಣ ಪ್ರಾಮಾಣಿಕ ಅವಿಶ್ರಾಂತ ಶ್ರಮದಿಂದಲೇ ಸಾಗಿದಾಗ ಆ ದಾರಿಯಲ್ಲಿ ಸಿದ್ಧಿ ದೊರೆಯುತ್ತದೆ. ಮನುಷ್ಯನಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ಒಂದು ನಿರ್ದಿಷ್ಟ ಗುರಿಗಾಗಿ ಮುಖ ಮಾಡಿ ನಿಲ್ಲಬೇಕು. "ಗುರಿಯಿಲ್ಲದ ಬದುಕು ಬಾಲಂಗಚ್ಚೆಯಿಲ್ಲದ ಗಾಳಿಪಟದಂತೆ" ಕೇವಲ ಗುರಿಯೊಂದಿದ್ದರೆ ಸಾಲದು, ಇಟ್ಟುಕೊಂಡ ಗುರಿಯಂತೆ ಅದನ್ನು ಮುಟ್ಟಲು ಬಯಸುವ ದಾರಿಯೂ ದಿಟ್ಟತನದಿಂದ ಸರಿಯಾಗಿ ನಿರ್ಮಿಸಿಕೊಳ್ಳಬೇಕು. ಅಂಥಹ ದಾರಿಯಲ್ಲಿ ಸೋಲುಗಳು

ಒದಗಬಹುದು. ಪುರಂದರದಾಸರು ಹೇಳಿದಂತೆ "ಕಲ್ಲಾಗಿರಲು ಬೇಕು ಈ ಕಠಿಣ ಭವ ತೊರೆಯೊಳಗೆ" ಬದುಕು ಸುಗಮವಾಗಿ ಸಾಗುವ ರೈಲುಗಾಡಿ ಅಲ್ಲ. ಗೆಲುವಿನ ಹಾದಿಯಲ್ಲಿ ಸೋಲು ಒಂದು ಸೋಪಾನ. ಇದೇ ಶಾಶ್ವತವಲ್ಲ, ಬದುಕಿನಲ್ಲಿ ಬರುವ ತೊಂದರೆಗಳಿಗೆ ಸರಿಯಾದ ಶಿಕ್ಷಣ ನೀಡುತ್ತದೆ. ಮನುಷ್ಯ ಯಾರೇ ಇರಲಿ ಅವನು ಎಷ್ಟು ವರ್ಷ ಜೀವಿಸಿದ್ದ ಎನ್ನುವುದು ಮುಖ್ಯವಲ್ಲ, ತನ್ನ ಜೀವಿತದ ಅವಧಿಯಲ್ಲಿ ಏನು ಸಾಧಿಸಿದ ಎನ್ನುವುದು ಮುಖ್ಯ. ಎಷ್ಟು ಸಲ ಉಸಿರಾಡಿದೆನ್ನುವುದು ಸರಿಯಲ್ಲ; ಏನು ವಿಚಾರ ಮಾಡಿದೆ ಎನ್ನುವುದು ಸರಿ. ಇದನ್ನೇ ಏಸುಕ್ರಿಸ್ತ ಹೇಳಿದಂತೆ ತಿನ್ನುವುದಕ್ಕಾಗಿ ಬದುಕಿಲ್ಲ, ಬದುಕುವುದಕ್ಕಾಗಿ ತಿನ್ನುವುದು ಮೇಲು ಎಂಬ ಮಾತು ತುಂಬಾ ಅರ್ಥಗರ್ಭಿತವೆನಿಸುತ್ತದೆ. ದುಡಿಮೆಗಾಗಿ ಬದುಕಬಾರದು; ಬದುಕುವುದಕ್ಕಾಗಿ ದುಡಿಯುವುದು ಅಗತ್ಯ. ಇಂದಿನ ಪರಿಸ್ಥಿತಿಯಲ್ಲಿ ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯಗಳನ್ನು ಮಾಡಿ ಬದುಕನ್ನು ಸಾರ್ಥಕ ಪಡಿಸಿಕೊಳ್ಳುವ ಮನೋಭಾವ ಇಂದು ಅತ್ಯಂತ ಜರೂರಾಗಿದೆ.

ಬದುಕನ್ನು ಶ್ರೀಮಂತಗೊಳಿಸಿಕೊಳ್ಳಬೇಕೆಂದರೆ ನಮ್ಮ ಬ್ಯಾಂಕ್ ಬ್ಯಾಲೆನ್ಸ್ ಅಧಿಕವಾಗಿರಬೇಕು, ಕಟ್ಟಿದ ಮನೆ, ಸಂಪಾದಿಸಿದ ಆಸ್ತಿ ಇತರರಿಗಿಂತ ಮಿಗಿಲಾಗಿರಬೇಕು, ನಮ್ಮಲ್ಲಿರುವ ಆಸೆ-ಆಶೋತ್ತರಗಳೆಲ್ಲಾ ಕ್ಷಣದಲ್ಲೇ ನೆರವೇರಬೇಕೆಂಬ ಮುಂತಾದ ಭಾವನೆಗಳೆಲ್ಲಾ ಶುದ್ಧ ಮೂರ್ಖತನದ ಗುಣಗಳಾಗಬಹುದು. ಭೌತಿಕ ವಸ್ತುಗಳು ಮನುಷ್ಯನಿಗೆ ಬೇಡವೆಂದಲ್ಲ, ಅವುಗಳಿಗೆ ಮಿತಿ ಇರಬೇಕು. ತನ್ನ ಮಿತಿಯನ್ನೇ ಕಳೆದುಕೊಂಡು ಜಗತ್ತನ್ನೇ ಸಂಪಾದಿಸಿದರೇನು ಎಂಬ ಒಂದು ಮಾತು ಬೈಬಲ್‌ನಲ್ಲಿ ಬರುತ್ತದೆ. ಭೂಮಿಯ ಮೇಲೆ ಜನಿಸಿದ ಪ್ರತಿಯೊಂದು ಜೀವಿಯೂ ಸಾಯುವತನಕ ಎಲ್ಲ ಆಗು-ಹೋಗುಗಳನ್ನು ಬದುಕಿನುದ್ದಕ್ಕೂ ಅನುಭವಿಸಬೇಕಾಗುತ್ತದೆ. ಇದು ಯಾರಿಗೂ ತಪ್ಪಿದ್ದಲ್ಲ. ತೊಟ್ಟಿಲಿನಿಂದ ಮನಸಣದವರೆಗೆ ಹಬ್ಬಿದಂತಹ ಕಾಲವನ್ನೇ ಬದುಕೆನ್ನಬಹುದು. ಈ ಬದುಕೆಂಬುದು ಪ್ರತಿಹಂತದಲ್ಲಿ ಪಕ್ವವಾಗುವುದರೆಡೆಗೆ ಚಲಿಸುತ್ತಿರುತ್ತದೆ. ಇದು ನಡೆಸಲು ಏನೆಲ್ಲಾ ಬೇಕೆಂಬ ಆಲೋಚನೆ ಇರಬೇಕು. ಏಕೆಂದರೆ ನಾವಿರುವ ಸಂಬಂಧ ವಿಧುವುದರಿಂದ ಅಂಥಹ ಸಂಬಂಧವೇನೆಂದು ತಿಳಿಯದೇ ನಮ್ಮ ಬದುಕು ಸುಗಮವಾಗಲಾರದು.

ಬಾಳೆಂಬುದು ಬಾಳೆಯ ಗಿಡದಂತಿರಬೇಕೆಂದು ಒಂದು ಕಡೆ ಬೇಂದ್ರೆಯವರು ಹೇಳುತ್ತಾರೆ. ಒಂದು ಬಾಳೆಗಿಡ ಒಂದೇ ಒಂದು ಬಾಳೆಗೊನೆ ಬಿಡುವತನಕ ಸುಂದರವಾಗಿ ಬದುಕಿ ಉದ್ದಿಷ್ಟ ಫಲ ಪೂರ್ಣವಾದೊಡನೆ ಸಾಯುವಾಗ ತನ್ನ ಕಾಲ ಬುಡದಲ್ಲಿ ತನ್ನಂತೆಯೇ ಮತ್ತೊಂದು ಬಾಳೆ ಸಸಿಗೆ ಜೀವನೀಡಿ ಸಾಯುತ್ತದೆ. ಬಾಳೆ ಈ ಅರ್ಥದಲ್ಲಿ ಸಾಯುವುದೇ ಇಲ್ಲ. ಪ್ರಕೃತಿಯ ಧ್ಯೇಯ ಪೂರ್ಣ ವ್ಯಾಪಾರಕ್ಕೆ ಇದು ಅದ್ಭುತವಾದ ಸಾಕ್ಷಿಯಾಗಿದೆ. ಬಾಳೆ ಗಿಡದಂತೆ ನಮ್ಮ ಬದುಕು ಅರ್ಥಪೂರ್ಣವಾಗಬೇಕು.

ನಮ್ಮ ಬದುಕು ದೈವದತ್ತವಾದ ಒಂದು ಅಪೂರ್ವವಾದ ಕೊಡುಗೆ. ಆದಿ-ಅಂತ್ಯದ ನಡುವೆ ರೇಷ್ಮೆಯ ನೂಲು ಇದ್ದಂತೆ. ಹಾಗೆಯೇ ಅಪರೂಪವಾಗಿ ದೊರಕಿದ ಅಮೂಲ್ಯವಾದ ನಿಧಿಯಿದ್ದಂತೆ. ದಾಸರು ಹೇಳಿದಂತೆ ಮಾನವ ಜನ್ಮವು ದೊಡ್ಡದು ಹೀಗಿರುವಾಗ ಬದುಕಿನ ಪ್ರತಿಕ್ಷಣವನ್ನು ಪ್ರೀತಿಯಿಂದ ತಬ್ಬಿಕೊಳ್ಳಬೇಕು. ಇದಕ್ಕೆ ಬೇಕಾದ ಸಾಮರ್ಥ್ಯ ನಮ್ಮ ಮನಸ್ಸಿನಲ್ಲಿಯೇ ಇದೆಯೆಂಬ ಅರಿವು ಮುಖ್ಯವಾದದ್ದು. ಒಬ್ಬ ತತ್ವಜ್ಞಾನಿ ಹೇಳುವಂತೆ "ನಾವು ಈ ದಾರಿಯಲ್ಲಿ ನಡೆಯುವುದು ಒಂದೇ ಒಂದು ಸಲ ಮಾತ್ರ" ಅದೇ ರೀತಿ "ಬದುಕೆಂಬುದು ಸ್ವಲ್ಪ ಹೊತ್ತು ಉರಿದು ಹೋಗುವ ಮೊಂಬತ್ತಿಯಿದ್ದಂತೆ" ಎಂದು ಶೇಕ್ಸ್‌ಪೀಯರ್ ಹೇಳಿದ್ದಾನೆ. ನಮ್ಮ ಜೀವನವನ್ನು ರೂಪಿಸಿಕೊಳ್ಳುವುದು ನಮ್ಮ ಕೈಯೊಳಗಿದೆ. ವಿವೇಚನೆಯಿಂದ ಸರಿಯಾಗಿ ನಡೆಸಿದರೆ ನಮಗೆ ನಾವೇ ಗೆಳೆಯರಾಗುತ್ತೇವೆ, ದಾರಿತಪ್ಪಿ ಅವಿವೇಕದಿಂದ ವರ್ತಿಸಿದಾಗ ನಮಗೆ ನಾವೇ ಶತ್ರುಗಳಾಗುತ್ತೇವೆ.

ಬದುಕಿನಲ್ಲಿ ನಿರಂತರ ಬೆಳೆಯುವುದಕ್ಕೆ ಛಲ ಮತ್ತು ಅತೃಪ್ತಿಗಳೇ ಮುಖ್ಯ ಕಾರಣವಾಗುತ್ತವೆ. ಪೂರ್ಣ ತೃಪ್ತನಾದವನು ದೈಹಿಕವಾಗಿ, ಬೌದ್ಧಿಕವಾಗಿ ಎಂದಿಗೂ ಬೆಳೆಯಲಾರ. ಅತೃಪ್ತಿಯನ್ನೇ ಕ್ರಿಯಾಶೀಲತೆಯ ಅಸ್ತ್ರವನ್ನಾಗಿಟ್ಟುಕೊಳ್ಳುವವನೇ ಜಾಣ. ಹಾಗೆಯೇ 'ಕರ್ಮಣ್ಣೇವಾದಿಕಾರಸ್ತೇ ಮಾಫಲೇಷುಕದಾಚನ' ಬದುಕಿನಲ್ಲಿ ಫಲಾಪೇಕ್ಷೆ ಇಲ್ಲದೇ ಕರ್ಮಯೋಗಿಯಾಗಿ ಕರ್ತವ್ಯವನ್ನು ಕೈಗೆತ್ತಿಕೊಳ್ಳಬೇಕು. ನಮ್ಮ ಸುತ್ತಲಿರುವವರನ್ನು ಸಂತೋಷವಾಗಿರಿಸದೆ ನಾವು ಸಂತೋಷವಾಗಿರುವುದು ಸಂಭವವಲ್ಲ. ಈ ಬದುಕು ಅಲ್ಪಕಾಲೀನ. ಈ ಪ್ರಪಂಚದ ಬೆಡಗು-ಭಿನ್ನಾಣಗಳೆಲ್ಲಾ ತಾತ್ಕಾಲಿಕ. ಅನ್ಯರ ಸುಖಕ್ಕಾಗಿ ಯಾರು ಬದುಕುತ್ತಾರೋ ಅವರೇ ಅಮರರು. ಉಳಿದವರೆಲ್ಲ ಜೀವಂತ ಶವಗಳಷ್ಟೆ.





"ಪರೋಪಕಾರಾರ್ಥಂ ಇದಂ ಶರೀರಂ" ಪರರ ಹಿತಕ್ಕಾಗಿ ಸಮಾಜದಲ್ಲಿ ಪ್ರತಿಯೊಬ್ಬರು ಶ್ರಮಿಸಿದಾಗ ದೊರಕುವ ಸುಖವೇ ಶ್ರೇಷ್ಠ ಸುಖವಾದುದು. ಈ ಭೂಮಿಯ ಮೇಲೆ ಜೀವಿಸೋದಕ್ಕೆ ಆ ಭಗವಂತನಿಗೆ ನಾವು ಕೊಡಬೇಕಾದ ಬಾಡಿಗೆಯೆಂದರೆ ಇನ್ನೊಬ್ಬರಿಗೆ ಉಪಯೋಗವಾಗಿರೋದು ಅಂತ ಕೈಲಾಸಂ ಹೇಳಿದ್ದಾರೆ. ಏಕೆಂದರೆ ಈ ಜಗತ್ತಿನಲ್ಲಿ ಯಾರ ಸುಖವೂ ಉಳಿಯುವುದಿಲ್ಲ, ದುಃಖವೂ ಉಳಿಯುವುದಿಲ್ಲ. ಕೊನೆಗೆ ನೋಡಿದರೆ ನಾವೇ ಶಾಶ್ವತವಲ್ಲ. ಆದರೂ ಬದುಕೆಂಬ ವ್ಯಾಪಾರದಲ್ಲಿ ಬೆನ್ನತ್ತಿದಾಗ ಲಾಭ-ನಷ್ಟ, ಜಯ-ಅಪಜಯಗಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ ಒಂದಕ್ಕೆ ಬೆನ್ನು ಹತ್ತಿದಾಗ ಮತ್ತೊಂದು ಅದರ ಹಿಂದೆ ಇದ್ದೇ ಇರುತ್ತದೆ. ಇದು ಸಹಜ. ಕವಿ ವಿನಾಯಕರು ಹೇಳುವಂತೆ "ಹುಟ್ಟಿಬಂದ ಮೇಲೆ ಕಟ್ಟಿದ ಬುತ್ತಿಯ ಗಂಡು ಬಿಚ್ಚಿ ಉಣ್ಣಬೇಕು ಎಡವುತ, ಮುಗ್ಗರಿಸುತ, ಬೀಳುತ, ಏಳುತ ಊರಿನ ದಾರಿ ಹಿಡೀಬೇಕು" ಎಂಬುದು ಇಲ್ಲಿ ಪ್ರಸ್ತುತವೆನಿಸುತ್ತದೆ.

ಬದುಕಿನಲ್ಲಿ ಏನು ಮಾಡಲಿ, ಮಾಡದಿರಲಿ ಕಾಲ ಮಾತ್ರ ತನ್ನಷ್ಟಕ್ಕೆ ತಾನೇ ಮುಂದುವರೆಯುತ್ತಿರುತ್ತದೆ. ಗಡಿಯಾರದ ಪೆಂಡ್ಯುಲಂ ಹಿಂದೆ ಮುಂದೆ ಆಡಿದರೂ ಕಾಲ ಮಾತ್ರ ಹೋಗುವುದು ಮುಂದಕ್ಕೆ. ಆಂಗ್ಲ ಭಾಷೆಯಲ್ಲಿ ಹೇಳುವಂತೆ "We are killing time" ಅಂದರೆ ಕಾಲವನ್ನು ನಾವು ಕೊಲ್ಲುತ್ತೇವೆ. ಆದರೆ ಕೊನೆಗೆ ಈ ಕಾಲವೇ ನಮ್ಮನ್ನು ಶಾಶ್ವತವಾಗಿ ಕೊಲ್ಲುತ್ತದೆ. ಯಾರ ಕಟ್ಟುಪಾಡಿಗೂ ಒಳಗಾಗದೇ ಈ ಪ್ರಕೃತಿ ತನ್ನ ಚಲನವಲನಗಳನ್ನು ಹೇಗೆ ಮಾರ್ಪಾಡು ಮಾಡಿಕೊಳ್ಳುತ್ತದೆಯೋ ಹಾಗೆ ನಾವು ಬದುಕಿನಲ್ಲಿ ಯಾವುದೇ ಸಾಧನೆಯತ್ತ ಕ್ರಿಯಾತ್ಮಕವಾಗಬೇಕು. ದಿನಗಳೆಲ್ಲಾ ನೀರಂತೆ ಹರಿದು ಹೋಗುವುದರಿಂದ ಎಚ್ಚೆತ್ತುಕೊಂಡು ಸೋಮಾರಿಯಾಗಿರದೇ ಏನಾದರೂ ಕಾಯಕ ಮಾಡುವವರಾಗಬೇಕು. ಮಹಾಭಾರತ, ಬ್ರಹ್ಮಸೂತ್ರ ಬರೆದು ಮುಗಿಸಿದ ವ್ಯಾಸನಿಗೆ ಒಮ್ಮೆ ನಿರರ್ಥಕತೆಯ ಭಾವನೆ ಬಂತಂತೆ. ಕಾಲವು ಮಂಜಿನಂತೆ ಕರಗುತ್ತಿರುವುದನ್ನು ಕಂಡು ಆತನಿಗೆ ಭಯ ಆವರಿಸಿದಾಗ ನಾರದನ ಮುಂದೆ ಈ ಬಗ್ಗೆ ಪ್ರಶ್ನಿಸಿದನಂತೆ. ಆಗ ನಾರದರು ಭಾಗವತ ಬರಿ ಎಂದು ಹೇಳಿದ್ದನಂತೆ. ಹೀಗೆ ಕಾಲ ಕಳೆಯುವುದು ಹೇಗೆಂದು ತಿಳಿಯದಾದಾಗ ಮತ್ತೊಬ್ಬ ಹಿರಿಯರಿಂದ ಮಾರ್ಗದರ್ಶನ ಪಡೆದು ಒಳ್ಳೆಯ ಕಾಯಕದತ್ತ ಹೊರಳಬೇಕು, ಜೀವನವನ್ನು ಪಾವನಗೊಳಿಸಿಕೊಳ್ಳಬೇಕು.

## ಮುಖಪುಟ

ದಿನಾಂಕ 24-5-1998ರಂದು ನೆಲಮಂಗಲದ ಪವಾಡದ ಬಸವಣ್ಣ ದೇವರ ಮಠದಲ್ಲಿ ನಡೆದ ಶ್ರೀ ಶ್ರೀ ಸದಾಶಿವಸ್ವಾಮಿಗಳ ರಜತ ಮಹೋತ್ಸವ ಮತ್ತು ಗ್ರಾಮಾಂತರ ಬಸವ ಜಯಂತಿ ಕಾರ್ಯಕ್ರಮದ ಉದ್ಘಾಟನೆ

## ಹಿಂಬದಿ ಪುಟ

1. ಶ್ರೀ ಶ್ರೀಗಳವರಿಂದ ಪ್ರವೇಶ ಭಾಗ್ಯ ಪಡೆಯುತ್ತಿರುವ ಅದೃಷ್ಟಶಾಲಿ.

2. ಬೆಂಗಳೂರಿನಲ್ಲಿ ಕೆ. ಕೆ. ಎಂ. ಪಿ. ನಿರ್ಮಿಸಿರುವ ರಮಣಶ್ರೀ ಸಭಾಂಗಣದ ಉದ್ಘಾಟನೆಯನ್ನು ಜೂನ್ 1ರಂದು ಪರಮ ಪೂಜ್ಯ ಡಾ.ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಕಂದಾಯ ಸಚಿವ ಶ್ರೀ ಬಿ. ಸೋಮಶೇಖರ, ರಮಣಶ್ರೀ ಗ್ರೂಪಿನ ವ್ಯವಸ್ಥಾಪಕ ನಿರ್ದೇಶಕ ಶ್ರೀ ಎಸ್. ಷಡಕ್ಷರಿ, ಸಮಾಜ ಕಲ್ಯಾಣ ಸಚಿವ ಶ್ರೀ ಕೆ. ಎಂ. ಕೃಷ್ಣಾರೆಡ್ಡಿ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

## ಸಿದ್ಧಗಂಗಾ ಪತ್ರಿಕೆ ಕುರಿತು ಅಭಿಪ್ರಾಯ

ಸಿದ್ಧಗಂಗಾ ಪತ್ರಿಕೆಯ ಬಸವಸಂಚಿಕೆ ಕೈ ಸೇರಿತು. ಅದೆಷ್ಟು ಸುಂದರವಾದ ಸಂಚಿಕೆ ಅದು. ಕೇವಲ ಅಚ್ಚುಕಟ್ಟುತನದಿಂದಲೇ ಅಲ್ಲ ವಿದ್ವತ್ಪೂರ್ಣವಾದ ಲೇಖನಗಳಿಂದಲೂ ಅತ್ಯಂತ ಸುಂದರವಾದ ಸಂಚಿಕೆ ಅದು.

**ಡಾ ಎಲ್. ಬಸವರಾಜು**
ನಿವೃತ್ತ ಕನ್ನಡ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ

ಶ್ರೀ ಗೊ. ರು. ಚ. ಅವರ 'ಕಾಯಕ ಯೋಗ ಶ್ರೀ ಸಿದ್ಧಗಂಗ' ಮನಸ್ಸಿಗೆ ಬಹಳ ಹಿಡಿಸಿತು. ಶ್ರೀ ಶ್ರೀಗಳ ತಪೋಮಯ ಜೀವನ ಈ ಕ್ಷೇತ್ರದ ಬೆಳವಣಿಗೆಯಲ್ಲಿ ಮುಖ್ಯ ಪಾತ್ರ ವಹಿಸಿರುವುದನ್ನು ಲೇಖನಗಳ ಹಿನ್ನೆಲೆಯಲ್ಲಿ ಎದ್ದು ತೋರಿಸುತ್ತಾರೆ.

**ವಿವೇಕ ಹಂಸ, ಬೆಂಗಳೂರು**

# ಕಡಿಮೆ ಹಣ ಖರ್ಚುಮಾಡಿ

# ಹೆಚ್ಚು ಬಟ್ಟೆಗಳನ್ನು ಒಗೆಯಿರಿ.

- ಇದೀಗ ನೀವು ಸಾಬೂನಿಗೆ ಕಡಿಮೆ ಹಣ ಖರ್ಚು ಮಾಡಿ ಹೆಚ್ಚು ಬಟ್ಟೆಗಳನ್ನು ಒಗೆಯಬಹುದು.
- ಕಸ್ತೂರಿ ನೀಲಂ ಹಾಗೂ ಕಸ್ತೂರಿ ಬಾರ್ ಸೋಪ್ ಉಪಯೋಗಿಸುವುದರಿಂದ ಇದು ಸಾಧ್ಯ.
- ಕಸ್ತೂರಿ ಸಾಬೂನುಗಳು ಬಹು ಉಳಿತಾಯಕರವಾದುದು ಅಲ್ಲದೆ, ಪ್ರತಿ ಬಾರ್ ಸೋಪಿನಿಂದಲೂ ಹೆಚ್ಚು ಬಾರಿ ಒಗೆಯಲು ಸಾಧ್ಯವಾಗುತ್ತದೆ.
- ಇದರಲ್ಲಿ ವಿಶೇಷ ಡಿಟರ್ಜೆಂಟುಗಳು ಮಿಶ್ರಿತ ವಾಗಿರುವುದರಿಂದ ನಿಮ್ಮ ಉಡುಪುಗಳು ಬಿಳುಪಿಗಿಂತಲೂ ಅತ್ಯಧಿಕ ಉಜ್ವಲವಾಗಿರುತ್ತವೆ.

**ಕಸ್ತೂರಿ ಸಾಬೂನುಗಳನ್ನು ಇಂದೇ ಉಪಯೋಗಿಸಿರಿ**

'ಕಸ್ತೂರಿ'

ನೀಲಂ ಬಾರ್ ಸೋಪ್

'ಕಸ್ತೂರಿ'

ನೀಲಂ ಬಾರ್ ಸೋಪ್

# ರಾಮಕೃಷ್ಣ ಆಯಿಲ್ ಮಿಲ್

# ತುಮಕೂರು





ಹಾರ್ದಿಕ ಶುಭಾಶಯಗಳೊಂದಿಗೆ

(ಸ್ಥಾಪನೆ : 1982)

# ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ ನೌಕರರ ಪತ್ತಿನ ಸಹಕಾರ ಸಂಘ ನಿಯಮಿತ

ಎಸ್.ಐ.ಟಿ. ಕ್ಯಾಂಪಸ್, ತುಮಕೂರು-572 103

| | | |
|---|---|---|
| ಸದಸ್ಯರ ಸಂಖ್ಯೆ | : | 1072 |
| ಷೇರು ಮೊಬಲಗು | : | ರೂ. 16,03,400.00 |
| ವಾರ್ಷಿಕ ವಹಿವಾಟು | : | ರೂ. 1.8 ಕೋಟಿ |
| ಖಾಯಂ ಠೇವಣಿ ಮೇಲಿನ ಬಡ್ಡಿ | : | 46 ದಿನಗಳಿಂದ 1 ವರ್ಷಕ್ಕೆ 12.5% |
| | : | 1 ವರ್ಷದಿಂದ 2 ವರ್ಷಕ್ಕೆ 13.5% |
| | : | 2 ವರ್ಷದಿಂದ 3 ವರ್ಷಕ್ಕೆ 15.0% |
| | : | 3 ವರ್ಷಕ್ಕೆ ಮೇಲ್ಪಟ್ಟು 16.0% |
| ಸದಸ್ಯರುಗಳಿಗೆ ಸಾಲದ ಸೌಲಭ್ಯ | : | ರೂ. 50,000.00 ಗಳವರೆಗೆ |

**ನಿರ್ದೇಶಕರುಗಳು [ಕಾರ್ಯಕಾರಿ ಮಂಡಳಿಯ ಸದಸ್ಯರುಗಳು]**

ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು - ಗೌರವಾಧ್ಯಕ್ಷರು

| | | | |
|---|---|---|---|
| ಪ್ರೊ. ಬಿ. ಗಂಗಾಧರಯ್ಯ | ಅಧ್ಯಕ್ಷರು | ಶ್ರೀ ಕೆ. ಕೃಷ್ಣರಾವ್ | ನಿರ್ದೇಶಕರು |
| ಶ್ರೀ ಎಸ್. ವಿಶ್ವನಾಥಯ್ಯ | ಉಪಾಧ್ಯಕ್ಷರು | ಶ್ರೀ ಡಿ. ಎಸ್. ಚಂದ್ರಶೇಖರಯ್ಯ | " |
| ಪ್ರೊ. ಎಸ್.. ಎಂ. ಶಶಿಧರ್ | ನಿರ್ದೇಶಕರು | ಶ್ರೀ ಎಂ. ಆರ್. ರಂಗನಾಥಯ್ಯ | " |
| ಡಾ. ಕೆ. ಎಸ್. ನಿರಂಜನಯ್ಯ | " | ಶ್ರೀಮತಿ ಟಿ. ನಳಿನಾ | " |
| ಡಾ. ಶಿವಕುಮಾರಯ್ಯ | " | ಶ್ರೀ ಎಸ್. ಮುದ್ದಭೈರಪ್ಪ | " |
| ಶ್ರೀ ಪಿ. ಎಸ್. ಸದಾಶಿವಯ್ಯ | " | ಶ್ರೀ ಜಿ. ವಿ. ಅಂಜನಪ್ಪ | " |
| ಶ್ರೀ ಕೆ. ವೀರಭದ್ರಯ್ಯ | " | ಶ್ರೀ ಬಿ. ಆರ್. ನಾಗರಾಜು | " |

